CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಅಕ್ಟೋಬರ್ ೬, ೨೦೦೫ (ಆಶ್ವಯುಜ ೧೪, ಶಕ ವರ್ಷ ೧೯೨೭) | ಸಂಚಿಕೆ ೪೦ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಇಐಎಲ್/2005/1213 ದಿನಾಂಕ 07.7.2005.

2. ದಿನಾಂಕ 28.7.2005ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಮೆ: ಎನರ್‌ಕಾನ್ ಇಂಡಿಯಾ ಲಿಮಿಟೆಡ್ ಕಂಪನಿಗೆ ಬೆಳಗಾಂ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ 102.4 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರ ನಡವಳಿಗಳಲ್ಲಿ ನಡೆದ ಹಂಚಿಕೆ ಸಮಿತಿ ಸಭೆಯು ಅನುಮೋದಿಸಿರುತ್ತದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 198 ಎನ್‌ಸಿಇ 2005 ಬೆಂಗಳೂರು, ದಿನಾಂಕ 18ನೇ ಆಗಸ್ಟ್ 2005**

ಮೆ: ಎನರ್‌ಕಾನ್ ಇಂಡಿಯಾ ಲಿಮಿಟೆಡ್ ಕಂಪನಿಗೆ ಬೆಳಗಾಂ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ 102.4 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ.

| Sl No. | Proposed capacity in MW | Nearby villages of the proposed areas | Geographical area description of the project |
|---|---|---|---|
| *1* | *22.4 MW* | *Murgod, Rudrapur, Rudrapur Thanda, Subapur, Belguam District.* | *A large plateau situated on the East and SE of Murgod village. The plateau does not have any significant orientation. The potential area for development of wind power projects are identified as 'A' and 'B' these two areas are situated in Reserved Forest and the external features of the area as for the topomap, it is a mixture of open and dense scrub. The proposed area is covered in the following Geographical co-ordinates:*<br>***Latitude** : $15^0$51'18" – $15^0$55'0"N*<br>***Longitude** : $74^0$56'45" – $75^0$0'0"E*<br>***Peaks** : 800, 836, 822, 859m Amsl* |

| | | | |
|---|---|---|---|
| 2 | 6.4 MW | Yekkundi, Dhupdal, Belgaum District. | A NW-SE oriented ridge loocated on the North of Dhupdal village and is identified as Area 'O'. The identified area is a large plateau and external features of the area are open and dense scrub. The proposed area is coverd in the following Geographical co-ordinates:<br>**Latitude** : $15^{0}$0'0" – $15^{0}$0'35"N<br>**Longutide** : $75^{0}$51'13" – $75^{0}$52'42"E<br>**Peaks** : 855, 844m Amsl |
| | 12 MW | Goravankolla, Katmalli& Huli, Belgaum District. | A large plain area in 'U' shape designated as 'P' and is located on N-E of Saundatti and surrounded by goravankolla, Katmalli and Huli villages. this plateau has rocky knobs and scattered eucalptus. Plants the proposed area is covered in the following Geographical co-ordinates:<br>**Latitude** : $15^{0}$8'11" – $15^{0}$10'41"N<br>**Longutide** : $75^{0}$47'32" – $75^{0}$48'52"E<br>**Peaks** : 751, 756, 784m Amsl |
| | 17.6 MW | Mallapur, Basidoni & Gorobal, Belgaum District. | A large NE-SW oriented ridge identified, as 'Q' is located on the East of Manoli town. this potential area is surrounded by Mallapur, Basidoni and Gorobal. Village the area is situated in its reserved forest and the external features are open scrub. the proposed area is covered in the following Geographical co-ordinates:<br>**Latitude** : $15^{0}$10'53" – $15^{0}$14'47"N<br>**Longutide** : $75^{0}$49'52" – $75^{0}$53'23"E<br>**Peaks** : 744, 729, 750m Amsl |
| | 12 MW | Sirsangi, Guvankopa, Mallur, Belgaum District. | A NW-SE oriented plateau identified, as 'A' is located on the SW of Rampur and is surrounded by Sirsangi, Guvankopa, Mallur. The entire plateau is open scrub and connects with road unmetal ground .The proposed area is covered in the following Geographical co-ordinates:<br>**Latitude** : $15^{0}$52'36" – $15^{0}$55'26"N<br>**Longutide** : $75^{0}$15'0" – $75^{0}$16'51"E<br>**Peaks** : 743, 781m Amsl |
| | 17.6 MW | Kollur, Jalikatte, MullruBelgaum District. | The proposed area is has two independant hill ranges, of that, one is oriented predominantly in direction and another is in the NW-SE direction and is identified as 'B', These areas are located on the SE Rampur town. These areas are having rocky knobs and are having open the following Geographical co-orinates:<br>**Latitude** : $15^{0}$52'36" – $15^{0}$55'17"N<br>**Longutide** : $75^{0}$17'58" – $75^{0}$23'42"E<br>**Peaks** : 742,755, 742, 708, 672m Amsl |
| | 8 MW | Halgatti, Belgaum District. | A circular plateau located on the East of Ramdurg town and the area is identified as 'C' and is situated in the Reserved Forest. The proposed area appears to be open scrub and is coverd in the following Geographical co-orinates:<br>**Latitude** : $15^{0}$56'32" – $15^{0}$57'46"N<br>**Longutide** : $75^{0}$20'55" – $75^{0}$22'45"E<br>**Peaks** : 660, 711m Amsl |

| | | | |
|---|---|---|---|
| | *6.4 MW* | *Mudenur, Belgaum District.* | *A NW and SE oriented large plateau is located on the North of Ramadurga town and is identified as 'D' the proposed area is appears to be open scrub and is covered in the following Geographical co-orinates:*<br>***Latitude** : $15^0$58'36" – $15^0$59'14"N*<br>***Longutide** : $75^0$18'24" – $75^0$19'53"E*<br>***Peaks** : 689m Amsl* |
| **TOTAL** | | **102.4 MW** | |

1) ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ. ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2) ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3) ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೋ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4) ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತೀ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸ0ಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿ0ದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿ0ದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ/ ಕಂದಾಯ / ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.
7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಅಭಿವೃದ್ದಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು..

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 1226 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಇಎಲ್–ಕೆಯುಎಂ/2005/1082 ದಿನಾಂಕ 23.6.2005 ಮತ್ತು ಕೆಆರ್‌ಇಡಿ/08/ಎಸ್‌ಡಿಪಿಎಲ್/2005/1372

2. ದಿನಾಂಕ 28.7.2005ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಮೆ: ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ಕುರುಮರಡಿಕೆರೆ ಎಂಬಲ್ಲಿ 2.5 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರ ನಡವಳಿಗಳಲ್ಲಿ ನೆಡೆದ ಹಂಚಿಕೆ ಸಮಿತಿ ಸಭೆಯು ಅನುಮೋದಿಸಿರುತ್ತದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 190 ಎನ್‌ಸಿಇ 2005 ಬೆಂಗಳೂರು, ದಿನಾಂಕ 18ನೇ ಆಗಸ್ಟ್ 2005**

ಮೆ: ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ಕುರುಮರಡಿಕೆರೆ ಎಂಬಲ್ಲಿ 2.5 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು (North South oriented ridge located on the North East of Kurumardikere has 1003 M Peak, the portion of this ridge i.e. the Southeren most ridge) ಸರ್ಕಾರವು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ.

1) ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ. ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2) ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.

3) ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4) ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತೀ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸ೦ಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳ೦ದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.

6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ / ಕಂದಾಯ / ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.

7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.

8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.

9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.

10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು..

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಪಿ.ಆರ್. 1199 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ತಿದ್ದುಪಡಿ**

**ಸಂಖ್ಯೆ: ಇಎನ್ 227 ಎನ್‌ಸಿಇ 2005, ಬೆಂಗಳೂರು, ದಿನಾಂಕ 30ನೇ ಆಗಸ್ಟ್ 2005**

ಸರ್ಕಾರದ ಆದೇಶ ಸಂಖ್ಯೆ ಇಂಇ 227 ಎನ್‌ಸಿಇ 2005 ದಿನಾಂಕ 19.8.2005ರಲ್ಲಿನ ನಿಬಂಧನೆಯ ಸಂಖ್ಯೆ 9ರಲ್ಲಿನ:

**"ಇದಕ್ಕೆ ಅನುಗುಣವಾಗಿ ಡಿ.ಪಿ.ಆರ್. ಸಲ್ಲಿಸಿ ಸಂಬಂಧಿತ ಇಲಾಖೆಗಳಾದ ಜಲ ಸಂಪನ್ಮೂಲ, ಕಂದಾಯ, ಪರಿಸರ ಅರಣ್ಯ ಮತ್ತು ಜೀವಿಶಾಸ್ತ್ರ ಹಾಗೂ ಕೆ.ಪಿ.ಸಿ.ಎಲ್. ನಿಂದ ಅನುಮತಿ ಪಡೆದು ಅಂತಿಮವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ತಾಂತ್ರಿಕ ಅನುಮೋದನೆ ಪಡೆಯಬೇಕು"**

ಎಂಬುದರ ಬದಲಾಗಿ

9. **"ಇದಕ್ಕೆ ಅನುಗುಣವಾಗಿ ಡಿ.ಪಿ.ಆರ್. ಸಲ್ಲಿಸಿ ಸಂಬಂಧಿತ ಇಲಾಖೆಗಳಾದ ಜಲ ಸಂಪನ್ಮೂಲ, ಕಂದಾಯ, ಪರಿಸರ ಅರಣ್ಯ ಮತ್ತು ಜೀವಿಶಾಸ್ತ್ರ ಇಲಾಖೆಗಳ ಅನುಮತಿ ಪಡೆದು ಅಂತಿಮವಾಗಿ ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತದಿಂದ ತಾಂತ್ರಿಕ ಅನುಮೋದನೆ ಪಡೆಯಬೇಕು"**

ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳ ತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಪಿ.ಆರ್. 1223 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ತಿದ್ದುಪಡಿ**

**ಸಂಖ್ಯೆ: ಇಎನ್ 210 ಎನ್‌ಸಿಇ 2005, ಬೆಂಗಳೂರು, ದಿನಾಂಕ 24ನೇ ಆಗಸ್ಟ್ 2005**

ಸರ್ಕಾರಿ ಆದೇಶ ಸಂಖ್ಯೆ: ಇಎನ್ 210 ಎನ್‌ಸಿಇ 2005 ದಿನಾಂಕ: 20.8.2005 ರ ಶೆಡ್ಯೂಲ್‌ನ ಕ್ರಮ ಸಂಖ್ಯೆ: 4 ರಲ್ಲಿ ಬರುವ,

| | | |
|---|---|---|
| *4.5 MW* | *Masbinal, Ingaleshwartanda , Bijapur District.* | *The identified area has NW-SE orientation and is located on the East of Masbinal. It appears to be open scrub and a stony waste area. The proposed areas covered in the following Geographical co-ordinates:*<br>***Latitude** : $16^0$38'39" – $16^0$40'0"N*<br>***Longitude** : $76^0$58'28" – $76^0$0'0"E*<br>***Peaks** :665m Amsl* |

ಪಟ್ಟಿಯ ಬದಲಾಗಿ ಈ ಕೆಳಗಿನ ಪಟ್ಟಿಯನ್ನು ಮಾರ್ಪಾಡು ಮಾಡಿಕೊಂಡು ಓದಿಕೊಳ್ಳತಕ್ಕದ್ದು ;

| | | |
|---|---|---|
| *4.5 MW* | *Masbinal, Ingaleshwartanda, Bijapur District.* | *The identified area has NW-SE orientation and is located on the East of Masbinal. It appears to be open scrub and a stony waste area. The proposed areas covered in the following Geographical co-ordinates:*<br>***Latitude** : $16^0$38'39" – $16^0$40'0"N*<br>***Longitude** : $75^0$58'28" – $76^0$0'0"E*<br>***Peaks** :665m Amsl* |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಪಿ.ಆರ್. 1197 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** M/s Bhoruka Power Corporation Ltd. ಇವರಿಗೆ 4 ಮೆಗಾವಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ – ಆದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಕಲಂಜ/2005/1337 ದಿನಾಂಕ : 21.7.2005.

2) ದಿನಾಂಕ : 28.7.2005 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Bhoruka Power Corporation Ltd. ಈ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಕಲಂಜ ಗ್ರಾಮದ ನೆರಿಯಾ ನದಿಗೆ ಅಡ್ಡಲಾಗಿ 4 ಮೆಗಾ ವಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆಯ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆಗಳ ಹಂಚಿಕೆಯ ಪಟ್ಟಿ ಕ್ರಮ ಸಂಖ್ಯೆ 1 ರಲ್ಲಿ ಅನುಮೋದಿಸಿದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 221 ಎನ್‌ಸಿಇ 2005, ಬೆಂಗಳೂರು, ದಿನಾಂಕ: 23ನೇ ಆಗಸ್ಟ್ 2005**

M/s Bhoruka Power Corporation Ltd. ಈ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಕಲಂಜ ಗ್ರಾಮದ ನೆರಿಯಾ ನದಿಗೆ ಅಡ್ಡಲಾಗಿ 4 ಮೆಗಾವಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Longitude $75^0$ 25' East & Latitude $12^0$ 56' North) ಈ ಕೆಳಗಿನ ನಿಬಂಧನೆಗೊಳ ಪಟ್ಟು ಹಂಚಿಕೆ ಮಾಡಲಾಗಿದೆ.

1. (ಅ) ಹಂಚಿಕೆದಾರರು ಈ ಅದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.
   (ಆ) ಅಂತಹ ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.
   (ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದ೦ತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.
2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.
   (ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.
4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.
5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಟಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅ೦ಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಟಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1239

**ಸುರೇಶ್.ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ನಿರುದ್ಯೋಗಿ ಪದವೀಧರರು ಹಾಗೂ ಡಿಪ್ಲೊಮೋ ಇಂಜಿನಿಯರ್‌ದಾರರಿಗೆ ಗುತ್ತಿಗೆದಾರರಾಗಿ ನೊಂದಾಯಿಸಲು ಕೆಲವು ರಿಯಾಯಿತಿಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿಎಸ್: ಸಿಎಸ್‌ಎಫ್: ನಿ.ಪ: ರಿಯಾಯ್ತಿ: 04, ದಿನಾಂಕ: 03–12–2004.
2. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ: 169 ಸಿಅರ್‌ಎಂ 2000, ದಿನಾಂಕ 3–5–2001.

**ಪ್ರಸ್ತಾವನೆ:**

ಲೋಕೋಪಯೋಗಿ ಹಾಗೂ ನೀರಾವರಿ ಇಲಾಖೆಗಳಲ್ಲಿ ನಿರುದ್ಯೋಗಿ ಪದವೀಧರ ಹಾಗೂ ಡಿಪ್ಲೊಮೋ ಇಂಜಿನಿಯರ್‌ಗಳಿಗೆ ಗುತ್ತಿಗೆದಾರರಾಗಿ ನೋಂದಾಯಿಸಿಕೊಳ್ಳುವ ಬಗ್ಗೆ ಪ್ರಥಮವಾಗಿ ಕೆಲವು ರಿಯಾಯಿತಿಗಳನ್ನು ಸರ್ಕಾರದ ಆದೇಶ ಸಂಖ್ಯೆ:ಪಿಡಬ್ಲ್ಯೂಡಿ 4 ಪಿಇಪಿ 74, ದಿನಾಂಕ:05–01–1975 ರಲ್ಲಿ ನೀಡಿದ್ದು, ಕೆಲವು ಹೆಚ್ಚುವರಿ ರಿಯಾಯಿತಿಗಳೊಡನೆ ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 29 ಸಿಆರ್‌ಎಂ 85, ದಿನಾಂಕ:15–09–1985 ರಲ್ಲಿ ನೀಡಿ 31–03–1994 ರವರೆಗೂ ವಿವಿಧ ಆದೇಶಗಳಲ್ಲಿ ಮುಂದುವರೆಸಲಾಗಿತ್ತು. ಈ ಯೋಜನೆಯ ಪ್ರಯೋಜನವನ್ನು ಮುಂದುವರೆಸುವ ಬಗ್ಗೆ ಸರ್ಕಾರದಲ್ಲಿ ಪರಿಶೀಲಿಸಿ ಈ ಯೋಜನೆಯ ಪ್ರಯೋಜನೆಯು ಅರ್ಹದಾರರಿಗೆ ತಲುಪಿದೆಯೇ ಹಾಗೂ ರಿಯಾಯಿತಿ ಸೌಲಭ್ಯಗಳು

ವಾಸ್ತವವಾಗಿ ದುರುಪಯೋಗವಾಗುವ ಸಂದರ್ಭ ಇದೆಯೇ ಮತ್ತು ವಾಸ್ತವವಾಗಿ ಈ ಪ್ರಯೋಜನಗಳು ಲಭಿಸಿದೆಯೇ ಎಂಬ ವಿವರವನ್ನು ಆರ್ಥಿಕ ಇಲಾಖೆಯ ಸಲಹೆಯಂತೆ ಸರ್ಕಾರದಲ್ಲಿ ವಿವರವಾಗಿ ಪರಿಶೀಲಿಸಲಾಯಿತು. ಮುಖ್ಯ ಇಂಜಿನಿಯರ್‌ಗಳ ವರದಿಯ ಪ್ರಕಾರ ಇಲ್ಲಿಯವರೆಗೆ ಸುಮಾರು 1,376 ಮಂದಿ ಈ ಯೋಜನೆಯಡಿಯಲ್ಲಿ ನೋಂದಣಿ ಮಾಡಿಕೊಂಡು ಆದೇಶದಲ್ಲಿನ ರಿಯಾಯಿತಿ ಪ್ರಯೋಜನವನ್ನು ಪಡೆದಿರುತ್ತಾರೆ. ಸಾಮಾನ್ಯವಾಗಿ ಈ ಯೋಜನೆಯು ಯಶಸ್ವಿಯಾಗಿದ್ದು ರಿಯಾಯಿತಿ ಪ್ರಯೋಜನವು ಗುತ್ತಿಗೆದಾರರಾಗಿ ನೋಂದಣಿ ಮಾಡಿಕೊಂಡಿರುವ ನಿರುದ್ಯೋಗಿ ಪದವೀಧರರು ಹಾಗೂ ಡಿಪ್ಲೊಮೊದಾರರಿಗೆ ಲಭಿಸಿದೆಯೆಂದು ವರದಿ ಮಾಡಲಾಗಿದೆ. ಬಹಳ ತಾಂತ್ರಿಕ ಪದವೀಧರರು ಹಾಗೂ ಡಿಪ್ಲೊಮೋ ಇಂಜಿನಿಯರ್‌ದಾರರು ವಿದ್ಯಾ ಸಂಸ್ಥೆಗಳಿಂದ ಹೊರ ಬರುತ್ತಿದ್ದು, ಎಲ್ಲರಿಗೂ ಸರ್ಕಾರದಲ್ಲಿ ಉದ್ಯೋಗ ಒದಗಿಸಲು ಅಸಾಧ್ಯವಾಗಿರುವ ಅಂಶವನ್ನು ಗಮನದಲ್ಲಿಟ್ಟುಕೊಂಡು ಇವರಿಗೆ ಸ್ವಯಂ ಉದ್ಯೋಗ ಒದಗಿಸಿಕೊಳ್ಳಲು ಒಂದು ಸಹಾಯ ಯೋಜನೆಯಾಗಿ, ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ಗುತ್ತಿಗೆದಾರರಿಗೆ ನೋಂದಣಿಯನ್ನು ಮಾಡಿಕೊಳ್ಳಲು ಇರುವ ರಿಯಾಯಿತಿಗಳನ್ನು ಮುಂದುವರೆಸಬೇಕೆಂದು ಭಾವಿಸಲಾಯಿತು. ಇಂಜಿನಿಯರಿಂಗ್ ಪದವೀಧರರು ಹಾಗೂ ಡಿಪ್ಲೊಮೋದಾರರು ಇಲಾಖೆಗಳಲ್ಲಿ ಗುತ್ತಿಗೆದಾರರಾಗಿ ನೋಂದಣಿ ಮಾಡಿಕೊಂಡಲ್ಲಿ ಇವರಿಗೆ ಇರುವ ಇಂಜಿನಿಯರಿಂಗ್ ತಿಳುವಳಿಕೆಯಿಂದ ಕಾಮಗಾರಿಗಳ ಗುಣಮಟ್ಟವನ್ನು ಸಹ ಕಾಯ್ದುಕೊಂಡು ಬರಲು ಅನುಕೂಲವಾಗುತ್ತದೆ ಹಾಗೂ ಸಾಮಾನ್ಯವಾಗಿ ಇವರು ಮಾಡಿರುವ ಕಾಮಗಾರಿಗಳ ಗುಣಮಟ್ಟವು ತೃಪ್ತಿಕರವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್ ರವರುಗಳು ವರದಿ ಮಾಡಿರುತ್ತಾರೆ. 3 ಮತ್ತು 4 ವರ್ಗದಲ್ಲಿ ಗುತ್ತಿಗೆದಾರರಾಗಿ ನೋಂದಣಿ ಮಾಡಿಕೊಂಡಿರುವವರಿಗೆ ಹಾಗೂ ಇಂಜಿನಿಯರ್ ಪದವೀಧರರು ಮತ್ತು ಡಿಪ್ಲೊಮೊ ಪಡೆದುಕೊಂಡು ಬರುವ ಅಭ್ಯರ್ಥಿಗಳಿಗೆ 2005 – 2010 ರ ಬ್ಲಾಕ್ ಅವಧಿಗೆ ರಿಯಾಯಿತಿಗಳನ್ನು ಮುಂದುವರೆಸುವ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಪರಿಶೀಲಿಸಲಾಯಿತು.

**ಸರ್ಕಾರದ ಆದೇಶ ಸಂಖ್ಯೆ: ಲೋಇ 147 ಸಿಆರ್‌ಎಂ 2005, ಬೆಂಗಳೂರು ದಿನಾಂಕ: 25ನೇ ಆಗಸ್ಟ್ 2005**

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಕೂಲಂಕಷವಾಗಿ ಪರಿಶೀಲಿಸಿದ್ದು, ನಿರುದ್ಯೋಗಿ ಪದವೀಧರ ಇಂಜಿನಿಯರ್‌ಗಳು ಹಾಗೂ ಡಿಪ್ಲೊಮೊ ಇಂಜಿನಿಯರ್‌ದಾರರು ಲೋಕೋಪಯೋಗಿ ಹಾಗೂ ನೀರಾವರಿ ಇಲಾಖೆಗಳು ಮತ್ತು ಸಿವಿಲ್ ಕಾಮಗಾರಿಗಳನ್ನು ನಿರ್ವಹಿಸುತ್ತಿರುವ ಕೃಷ್ಣಾ ಭಾಗ್ಯ ಜಲನಿಗಮ ನಿಯಮಿತ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಕರ್ನಾಟಕ ರಸ್ತೆ ಅಭಿವೃದ್ಧಿ ಸಂಸ್ಥೆ ಮತ್ತು ಅದೇ ರೀತಿಯ ಇತರ ಸಾರ್ವಜನಿಕ ವಲಯದ ಸಂಸ್ಥೆಗಳಲ್ಲಿ ಗುತ್ತಿಗೆದಾರರಾಗಿ ಸೂಕ್ತ ವರ್ಗದಲ್ಲಿ ನೋಂದಣಿ ಮಾಡಿಕೊಳ್ಳಲು ಕೆಳಕಂಡ ರಿಯಾಯಿತಿಗಳನ್ನು ನೀಡಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

**I ರಿಯಾಯಿತಿಗಳು:**

1. 4ನೇ ಹಾಗೂ 3ನೇ ವರ್ಗೀಕರಣ ಗುತ್ತಿಗೆದಾರರಿಗೆ ಗುತ್ತಿಗೆ ಹಾಕುವ ಸಂದರ್ಭದಲ್ಲಿ ಮುಂಗಡ ಹಣ (Earnest Money Deposit) ಕಟ್ಟುವುದರಿಂದ, ರಿಯೊಯಿತಿ,
2. ಕಾಮಗಾರಿಯನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ಗುತ್ತಿಗೆ ಕರಾರನ್ನು ಮಾಡಿಕೊಳ್ಳುವಾಗ ಶೇಖಡಾ ಎರಡೂವರೆಯಷ್ಟು ಮುಂಗಡ ಹಣವನ್ನು ಕಟ್ಟುವ ಬದಲು ಪ್ರತಿ ಬಿಲ್ಲಿನಲ್ಲಿ ಠೇವಣಿಯಾಗಿ ಹಿಡಿದುಕೊಳ್ಳುವುದು.
3. ಸ್ವೀಕರಿಸಲಾಗುವ ಗುತ್ತಿಗೆಗಳಲ್ಲಿ ಷೆಡ್ಯೂಲ್ ದರಕ್ಕಿಂತ ಶೇಕಡಾ 8 ರಷ್ಟು ಹೆಚ್ಚುವರಿ ಇದ್ದರೂ ಅಥವಾ ಬಂದಿದ್ದಂತಹ ಕಡಿಮೆ ದರದ ಗುತ್ತಿಗೆ ಮೇಲೆ ಕಡಿಮೆ ದರದ ಗುತ್ತಿಗೆ ಮೇಲೆ ನೊಂದಣಿಯಾದ ಇಂಜಿನಿಯರಿಂಗ್ ಪದವೀಧರರು ಹಾಗೂ ಡಿಪ್ಲೋಮೊ ಇಂಜಿನಿಯರ್ ಗುತ್ತಿಗೆದಾರರ ಗುತ್ತಿಗೆ ಶೇಕಡಾ 8 ರಷ್ಟು ಹೆಚ್ಚುವರಿ ಇದ್ದರೂ ಸಹ ಸರ್ಕಾರಕ್ಕೆ ಅನೂಕೂಲವಾಗುವುದಿದ್ದರೆ ಅಂತಹ ಗುತ್ತಿಗೆಗಳನ್ನು ಇವರಿಗೆ ನೀಡುವುದು.
4. ಗುತ್ತಿಗೆದಾರರಿಗೆ ನೊಂದಣಿಪಡಿಸಿಕೊಳ್ಳುವ ಸಂದರ್ಭದಲ್ಲಿ ಇವರಿಗೆ ಸಾಲ್ವೆನ್ಸಿ ಸರ್ಟಿಫಿಕೇಟ್ ಸಲ್ಲಿಸುವುದರಿಂದ ವಿನಾಯಿತಿ.
5. ನೋಂದಣಿ ಮಾಡಿಕೊಂಡಿರುವ ಇಂಜಿನಿಯರಿಂಗ್ ಪದವೀಧರರಿಗೆ 1.00 ಲಕ್ಷ ರೂ.ಗಳವರೆಗೂ ಹಾಗೂ ಡಿಪ್ಲೋಮೋದಾರರಿಗೆ 50,000 ರೂ.ಗಳವರೆಗೂ ತುಂಡು ಗುತ್ತಿಗೆ ಆಧಾರದ ಮೇಲೆ ಕಾಮಗಾರಿಯನ್ನು ನೇರವಾಗಿ ವಹಿಸುವುದು.
6. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಇಂಜಿನಿಯರಿಂಗ್ ಗುತ್ತಿಗೆದಾರರಿಗೆ ಪ್ರತಿ ಬಿಲ್ಲಿನಲ್ಲಿ 5,000 ರೂ.ಗಳಿಗೆ ಮೀರದಂತೆ ಕಾಮಗಾರಿಯ ವ್ಯಾಪ್ತಿಯಲ್ಲಿನ ಇಂಜಿನಿಯರ್, ಸಮ್ಮುಖದಲ್ಲಿ ಕೂಲಿಗಾರರಿಗೆ ಕೂಲಿಯನ್ನು ನೀಡುವುದಕ್ಕೆ ಮುಂಗಡವಾಗಿ ನೀಡುವುದು.

**II ಮೇಲ್ಕಂಡ ರಿಯಾಯಿತಿಗಳನ್ನು ಕೆಳಕಂಡ ನಿಬಂಧನೆಗಳಿಗೆ ಒಳಪಡಿಸಿದೆ:**

1. ನಿರುದ್ಯೋಗ ಪದವೀಧರರು ಹಾಗೂ ಡಿಪ್ಲೋಮೋ ಇಂಜಿನಿಯರಿಂಗ್ ಪದವೀಧರರು ಯಾವುದೇ ಮಾನ್ಯತೆ ಪಡೆದ ವಿದ್ಯಾ ಸಂಸ್ಥೆಯ ಸಂಬಂಧಪಟ್ಟ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರುವುದಾಗಿಯೂ ಇವರು ನಿರುದ್ಯೋಗಿಗಳಾಗಿ ಉಳಿದಿರುವುದಾಗಿ ಪ್ರಮಾಣ ಪತ್ರವನ್ನು ಸಲ್ಲಿಸಬೇಕು.
2. ಸಂಬಂಧಪಟ್ಟ ಉದ್ಯೋಗ ವಿನಿಮಯ ಕೇಂದ್ರದಲ್ಲಿ, ಅವರ ಹೆಸರಿನ್ನು ನೋಂದಣಿ ಮಾಡಿಕೊಳ್ಳಬೇಕು. ಸಾಕಷ್ಟು ಸ್ವಂತ ಆದಾಯ ಅವರಿಗೆ ಇರುವುದಿಲ್ಲವೆಂದು ಪ್ರಮಾಣ ಪತ್ರವನ್ನು ಸಲ್ಲಿಸಬೇಕು.
3. ಕಾಮಗಾರಿಯನ್ನು ತೆಗೆದುಕೊಳ್ಳುವಾಗ ಒಮ್ಮೆಗೆ ಒಟ್ಟು 5.00 ಲಕ್ಷ ರೂ.ಗಳ ಕಾಮಗಾರಿಗಳ ಮಿತಿಯಲ್ಲಿಯೇ ಇರುತ್ತದೆಯೆಂದು ದೃಢೀಕರಿಸುವ ಪತ್ರವನ್ನು ನೀಡಬೇಕು.
4. ಈ ಇಂಜಿನಿಯರಿಂಗ್ ಪದವೀಧರ ಹಾಗೂ ಡಿಪ್ಲೋಮೋದಾರರ ಗುತ್ತಿಗೆಗಳನ್ನು ಅವರ ಹಿಂದಿನ ಕಾಮಗಾರಿಗಳ ಬಗ್ಗೆ ಕಾರ್ಯಧಾರಿತವನ್ನು (Performance) ಪರಿಗಣಿಸಿ, ಗುತ್ತಿಗೆಯನ್ನು ಒಪ್ಪಿಕೊಳ್ಳತಕ್ಕಂಥ ಅಧಿಕಾರಿಗೆ ಇವರ

ಗುತ್ತಿಗೆಗಳನ್ನು ಒಪ್ಪಿಕೊಳ್ಳುವ ಹಾಗೂ ತಿರಸ್ಕರಿಸುವ ಅಧಿಕಾರ ಹೊಂದಿರುತ್ತಾರೆ. ಆದರೆ ಗುತ್ತಿಗೆಗಳನ್ನು ತಿರಸ್ಕರಿಸುವ ಸಂದರ್ಭದಲ್ಲಿ ಅದರ ವಿವರವಾದ ಕಾರಣಗಳನ್ನು ಬರವಣಿಗೆಯಲ್ಲಿ ನಮೂದಿಸಿವುದು.

5. ಈ ಗುತ್ತಿಗೆದಾರರು ಕಾಮಗಾರಿಯನ್ನು ಮಧ್ಯದಲ್ಲಿ ಬಿಟ್ಟರೆ ಇವರ ಬಗ್ಗೆ ಪೀನಲ್ ಕ್ರಮವನ್ನು ತೆಗೆದುಕೊಳ್ಳಬೇಕು. ಸಕ್ಷಮ ಪ್ರಾಧಿಕಾರದ ಅನುಮೋದನೆ ಇಲ್ಲದೇ ಈ ಗುತ್ತಿಗೆದಾರರು ಯಾವುದೇ ಪವರ್ ಆಫ್ ಅಟಾರ್ನಿ ನೀಡುವುದಕ್ಕೆ ಅವಕಾಶವಿರುವುದಿಲ್ಲ ಹಾಗೂ ಇಂತಹ ಸಂದರ್ಭದಲ್ಲಿ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೇ ಪವರ್ ಆಫ್ ಅಟಾರ್ನಿ ನೀಡಿದಲ್ಲಿ ಪೀನಲ್ ಕ್ರಮಕ್ಕೆ ಒಳಪಡಬೇಕಾಗುತ್ತದೆ.
6. ವಾಸ್ತುಶಿಲ್ಪಿ ಇಂಜಿನಿಯರಿಂಗ್‌ದಾರರು ಗುತ್ತಿಗೆದಾರರಾಗಿ ನೋಂದಣಿ ಮಾಡಿಕೊಂಡಲ್ಲಿ ಅವರಿಗೆ ಕಟ್ಟಡ ಕಾಮಗಾರಿಯನ್ನು ಮಾತ್ರವೇ ನೀಡಬೇಕಾಗುತ್ತದೆ.
7. ಆದಷ್ಟು ಮಟ್ಟಿಗೆ ಇವರಿಗೆ ನೀಡಿದಂತಹ ಕಾಮಗಾರಿಗಳಲ್ಲಿ ಹೆಚ್ಚು ಬಂಡವಾಳ ಹೂಡಬೇಕಾದ ಅವಶ್ಯಕತೆಯಿಲ್ಲದಂತಹ ರಸ್ತೆ, ನಾಲೆ ಇತ್ಯಾದಿ ಕಾಮಗಾರಿಗಳನ್ನು ನೀಡುವುದು.
8. ಯಾವುದೇ ಕಾರಣಕ್ಕೂ ಇವರಿಗೆ ನೀಡಿರುವಂತಹ ಕಾಮಗಾರಿಗಳನ್ನು ಉಪ ಗುತ್ತಿಗೆಗೆ ನೀಡಕೂಡದು.
9. ಈ ಗುತ್ತಿಗೆದಾರರಿಗೆ ಮುಂಗಡ ಹಾಗೂ ಕಟ್ಟಡ ಸಾಮಗ್ರಿಗಳನ್ನು ಮುಂಗಡವಾಗಿ ನೀಡಿರುವುದನ್ನು ಕಾಮಗಾರಿಗೆ ಮಾತ್ರವೆ ಉಪಯೋಗಿಸಿಕೊಳ್ಳಲಾಗಿದೆ ಎಂಬುದನ್ನು ದೃಢಪಡಿಸುವುದಕ್ಕೂ ಹಾಗೂ ಮುಂಗಡನವನ್ನು ಸಂಬಂಧಪಟ್ಟ ಬಿಲ್ಲುಗಳಲ್ಲಿ ಮುರಿದುಕೊಳ್ಳುವುದಕ್ಕೂ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ಸಂಪೂರ್ಣ ಜವಾಬ್ದಾರಿ ಯುತರಾಗಿರುತ್ತಾರೆ.
10. ಗುತ್ತಿಗೆ ಕರಾರಿನಲ್ಲಿ ಒಪ್ಪಿಕೊಂಡಂತಹ ದರಗಳು (ಷೆಡ್ಯೂಲ್ ದರಗಳು) ಕಾಮಗಾರಿ ಮುಗಿಯುವರೆಗೆ ಊರ್ಜಿತವಾಗಿರುತ್ತದೆ.
11. ಕಾಮಗಾರಿಗಳನ್ನು ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ ಮಾಡಲಾಗುತ್ತಿದೆ ಎಂಬುದನ್ನು ಇಲಾಖೆಯು ಖಚಿತಪಡಿಸಿಕೊಳ್ಳುತ್ತಿರಬೇಕು.
12. ಕಾಮಗಾರಿಯನ್ನು ವಹಿಸುವ ಸಂದರ್ಭದಲ್ಲಿ ಮುಂಗಡ ಹಣವನ್ನು ಕಟ್ಟಿಸಿಕೊಳ್ಳಬೇಕಾಗಿರುವುದಿಲ್ಲ. ಆದರೆ ಭದ್ರತಾ ಠೇವಣಿಯನ್ನು ನಿಗಧಿತ ದರದಲ್ಲಿ ಬಿಲ್ಲುಗಳಲ್ಲಿ ಮುರಿದುಕೊಳ್ಳಬೇಕು.
13. ಪಿಡಬ್ಲ್ಯುಡಿ 64 (ಎ) ಪ್ರಪತ್ರದಲ್ಲಿ ಕರಾರು ಪತ್ರವನ್ನು ಕಾಮಗಾರಿಗಳನ್ನು ವಹಿಸುವುದಕ್ಕಿಂತ ಮುಂಚೆ ಮಾಡಿಕೊಳ್ಳಬೇಕು.
14. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಇಂಜಿನಿಯರ್ ಗುತ್ತಿಗೆದಾರರಿಗೆ ವಹಿಸಿದ ಕಾಮಗಾರಿಗಳಲ್ಲಿ ಕೂಲಿಯವರಿಗೆ ಹಣ ಪಾವತಿ ಮಾಡುವ ಸಂದರ್ಭ ಒದಗಿ ಬಂದರೆ ಕಾಮಗಾರಿಯನ್ನು ಮಾಡಿರುವಷ್ಟು ಮಟ್ಟಿಗೆ ಮಾತ್ರವೇ ಪಾವತಿ ಮಾಡಬೇಕಿರುತ್ತದೆ. ಈ ರೀತಿ ಕೂಲಿಗಾರರಿಗೆ ನೀಡಿದಂತಹ ಕೂಲಿ ದರವನ್ನು ಮುಂಗಡ ಎಂದು ಪರಿಗಣಿಸಿ ಲೋಕೋಪಯೋಗಿ ನಿಯಮಗಳಂತೆ ಮೊತ್ತವನ್ನು ಬಿಲ್ಲುಗಳಲ್ಲಿ ಹೊಂದಾಣಿಕೆ ಮಾಡಿಕೊಳ್ಳುವುದನ್ನು ಕಟ್ಟುನಿಟ್ಟಾಗಿ ಪಾಲಿಸುವುದು.
15. ಒಂದು ಬಾರಿಗೆ ಒಂದು ಕಾಮಗಾರಿಯನ್ನು ಮಾತ್ರವೇ ವಹಿಸಿ ಕೊಡಬೇಕು. ಆ ಕಾಮಗಾರಿಯು ತೃಪ್ತಿಕರವಾಗಿ ಪೂರ್ಣಗೊಂಡ ನಂತರವೇ ಮತ್ತೊಂದು ಕಾಮಗಾರಿಯನ್ನು ನೀಡಬಹುದಾಗಿದೆ.

ಇಲಾಖೆಯಲ್ಲಿ, ಗುತ್ತಿಗೆದಾರರ ನೋಂದಣಿ ಪ್ರವರ್ಗ 3 ಹಾಗೂ 4 ರಲ್ಲಿ ಈಗಾಗಲೇ ನೋಂದಾಯಿಸಲ್ಪಟ್ಟು, ರಿಯಾಯಿತಿಗಳನ್ನು ಪಡೆದಿರುವ ಇಂಜಿನಿಯರಿಂಗ್ ಪದವೀಧರರು ಹಾಗೂ ಡಿಪ್ಲೋಮೋದಾರರಿಗೆ ಮತ್ತು ಪದವಿ ಮತ್ತು ಡಿಪ್ಲೋಮೋವನ್ನು ಪಡೆದು ನೋಂದಣಿ ಬಯಸುವ ಅಭ್ಯರ್ಥಿಗಳಿಗೆ 01–04–2005 ರಿಂದ 31–03–2010 ರ ಸಾಲಿನವರೆಗಿನ ಬ್ಲಾಕ್ ಅವಧಿವರೆಗೆ ಮೇಲೆ ನೀಡಿರುವ ರಿಯಾಯಿತಿಗಳು ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್. 1289 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಪ್ರಮುಖ ಯೋಜನೆಗಳ/ಕಾರ್ಯಕ್ರಮಗಳಿಗೆ ವಾರ್ಷಿಕ ಯೋಜನಾ ಆಯವ್ಯಯದಲ್ಲಿ ಒದಗಿಸುವ ಮೊತ್ತದಲ್ಲಿ ಶೇಕಡ 1ರಷ್ಟನ್ನು ಮೌಲ್ಯಮಾಪನ ಅಧ್ಯಯನಗಳಿಗೆ ಮೀಸಲಾಗಿಡುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ: 17.11.2000ದ ಸರ್ಕಾರದ ಆದೇಶ ಸಂಖ್ಯೆ: ಸಾಂಹಸಾ 42 ಇವಿಎಫ್ (1) 99.

2. ದಿನಾಂಕ: 23.08.2005ರ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮಾಸಿಕ ಪರಿಶೀಲನಾ ಸಭೆ.

**ಪ್ರಸ್ತಾವನೆ:**

ಮೇಲೆ ಉಲ್ಲೇಖ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ, ಸರ್ಕಾರದ ಪ್ರಮುಖ ಕಾರ್ಯಕ್ರಮಗಳ ಅಧ್ಯಯನಗಳಿಗೆ ಹಣವನ್ನು ಮೀಸಲಿಡಲು ಮತ್ತು ಅನುಸರಿಸಬೇಕಾದ ಈ ಕೆಳಕಂಡ ವಿಧಿ ವಿಧಾನಗಳೊಂದಿಗೆ ಯೋಜನಾ ಇಲಾಖೆಯ ಆದೇಶವನ್ನು ಹೊರಡಿಸಿರುತ್ತದೆ.

i) ಪಂಚವಾರ್ಷಿಕ ಯೋಜನೆಯಲ್ಲಿ ರೂ. 100 ಲಕ್ಷ ಅಥವಾ ಹೆಚ್ಚಿಗೆ ಹಂಚಿಕೆ ಇರುವ ಎಲ್ಲಾ ಕಾರ್ಯಕ್ರಮಗಳನ್ನು ಪಂಚವಾರ್ಷಿಕ ಯೋಜನೆಯು ಅಂತ್ಯವಾಗುವುದಕ್ಕೆ ಮೊದಲೇ ಮೌಲ್ಯಮಾಪನ ಮಾಡಬೇಕು.

ii) ಮಾಲ್ಯಮಾಪನಕ್ಕಾಗಿ ಮತ್ತು ಮಾಲ್ಯಮಾಪನ ಅಧ್ಯಯನಗಳ ಶಿಫಾರಸ್ಸು ಅನುಷ್ಠಾನದ ಮಾನಿಟರಿಂಗಾಗಿ ಕಾರ್ಯಕ್ರಮಗಳ ಪಂಚವಾರ್ಷಿಕ ಯೋಜನೆಯ ಹಂಚಿಕೆಯ ಶೇ. 1ರಷ್ಟನ್ನು ಕನಿಷ್ಟ ರೂ. 1 ಲಕ್ಷ ಮತ್ತು ಗರಿಷ್ಠ ರೂ. 5 ಲಕ್ಷಗಳಿಗೆ ಒಳಪಟ್ಟು ವಾರ್ಷಿಕ ಯೋಜನಾ ಆಯವ್ಯಯದಲ್ಲಿ ಮೀಸಲಿಡಬೇಕು. ಈ ಮೊತ್ತದ ಪುನರ್ವಿನಿಯೋಗಕ್ಕೆ ಅನುಮತಿ ನೀಡುವುದಿಲ್ಲ.

iii) ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವಂತೆ ಇಲಾಖಾ ಮಾಲ್ಯಮಾಪನ ಸಮಿತಿ (ಡಿ ಇ ಸಿ) ರಚಿಸಿದೆ.
iv) ಮಾಲ್ಯಮಾಪನ ಸಮನ್ವಯ ಸಮಿತಿಯು ವಿಶೇಷ ಪ್ರಕರಣಗಳಲ್ಲಿ ಮಾಲ್ಯಮಾಪನ ಮಾಡದೇ ಇರುವ ಕಾರ್ಯಕ್ರಮಗಳ ಮುಂದುವರಿಕೆಗೆ ಅನುಮತಿ ನೀಡಿದ ಹೊರತು ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಮಾಲ್ಯಮಾಪನ ಮಾಡದೇ ಇರುವ ಕಾರ್ಯಕ್ರಮಗಳನ್ನು ನಂತರದ ಪಂಚವಾರ್ಷಿಕ ಯೋಜನೆಯಲ್ಲಿ ಮುಂದುವರಿಸಲು ಅನುಮತಿ ನೀಡುವುದಿಲ್ಲ.

ಮೇಲೆ ಉಲ್ಲೇಖ (2)ರಲ್ಲಿ ಓದಲಾದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮಾಸಿಕ ಪರಿಶೀಲನಾ ಸಭೆಯಲ್ಲಿ ಈ ವಿಷಯದ ಬಗ್ಗೆ ಚರ್ಚಿಸಿದ್ದು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸಂಬಂಧಿಸಿದಂತೆ ಮೌಲ್ಯಮಾಪನ ಅಧ್ಯಯನಗಳನ್ನು ನಡೆಸುವ ವಿಧಿವಿಧಾನಗಳನ್ನೊಳಗೊಂಡಂತೆ ಒಂದು ಇಲಾಖಾ ಮೌಲ್ಯಮಾಪನ ಸಮಿತಿಯನ್ನು ಹಾಗೂ ಆ ಸಮಿತಿಯ ಪ್ರಕಾರ್ಯಗಳನ್ನು ಒಳಗೊಂಡಂತೆ ಆದೇಶವನ್ನು ಹೊರಡಿಸಲು ತೀರ್ಮಾನಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಸಂಕಇ 50 ಸ್ವೀಮರ 2005, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಯಲ್ಲಿ ಸರ್ಕಾರದ ಪ್ರಮುಖ ಕಾರ್ಯಕ್ರಮಗಳ/ಯೋಜನೆಗಳ ಮೌಲ್ಯಮಾಪನ ಅಧ್ಯಯನಗಳಿಗೆ ಹಣವನ್ನು ಮೀಸಲಿಡಲು ಈ ಕೆಳಗಿನ ವಿಧಿವಿಧಾನಗಳನ್ನು ಅನುಸರಿಸಬೇಕಾಗುತ್ತದೆ.

i) ಪಂಚವಾರ್ಷಿಕ ಯೋಜನೆಯಲ್ಲಿ ರೂ. 100 ಲಕ್ಷ ಅಥವಾ ಹೆಚ್ಚಿಗೆ ಹಂಚಿಕೆ ಇರುವ ಎಲ್ಲಾ ಕಾರ್ಯಕ್ರಮಗಳನ್ನು ಪಂಚವಾರ್ಷಿಕ ಯೋಜನೆಯು ಅಂತ್ಯವಾಗುವುದಕ್ಕೆ ಮೊದಲೇ ಮೌಲ್ಯಮಾಪನ ಮಾಡಬೇಕು.
ii) ಮೌಲ್ಯಮಾಪನಕ್ಕಾಗಿ ಮತ್ತು ಮೌಲ್ಯಮಾಪನ ಅಧ್ಯಯನಗಳ ಶಿಫಾರಸ್ಸು ಅನುಷ್ಠಾನದ ಮಾನಿಟರಿಂಗಾಗಿ ಕಾರ್ಯಕ್ರಮಗಳ ಪಂಚವಾರ್ಷಿಕ ಯೋಜನೆಯ ಹಂಚಿಕೆಯ ಶೇ. 1ರಷ್ಟನ್ನು ಕನಿಷ್ಟ ರೂ. 1 ಲಕ್ಷ ಮತ್ತು ಗರಿಷ್ಠ ರೂ. 5 ಲಕ್ಷಗಳಿಗೆ ಒಳಪಟ್ಟು ವಾರ್ಷಿಕ ಯೋಜನಾ ಆಯವ್ಯಯದಲ್ಲಿ ಮೀಸಲಿಡಬೇಕು. ಈ ಮೊತ್ತದ ಪುನರ್ವಿನಿಯೋಗಕ್ಕೆ ಅನುಮತಿ ನೀಡುವುದಿಲ್ಲ.
iii) ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವಂತೆ ಇಲಾಖಾ ಮೌಲ್ಯಮಾಪನ ಸಮಿತಿ (ಡಿ ಇ ಸಿ) ರಚಿಸಿದೆ.
iv) ಮೌಲ್ಯಮಾಪನ ಸಮನ್ವಯ ಸಮಿತಿಯು ವಿಶೇಷ ಪ್ರಕರಣಗಳಲ್ಲಿ ಮೌಲ್ಯಮಾಪನ ಮಾಡದೇ ಇರುವ ಕಾರ್ಯಕ್ರಮಗಳ ಮುಂದುವರಿಕೆಗೆ ಅನುಮತಿ ನೀಡಿದ ಹೊರತು ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಮೌಲ್ಯಮಾಪನ ಮಾಡದೇ ಇರುವ ಕಾರ್ಯಕ್ರಮಗಳನ್ನು ನಂತರದ ಪಂಚವಾರ್ಷಿಕ ಯೋಜನೆಯಲ್ಲಿ ಮುಂದುವರಿಸಲು ಅನುಮತಿ ನೀಡುವುದಿಲ್ಲ.

ಈ ಮೇಲಿನ ಮೌಲ್ಯಮಾಪನ ಅಧ್ಯಯನಗಳಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಒಂದು ಮೌಲ್ಯಮಾಪನ ಸಮಿತಿ (ಡಿ.ಇ.ಸಿ) ಹಾಗೂ ಆ ಸಮಿತಿಯ ಪ್ರಕಾರ್ಯಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

**ಇಲಾಖಾ ಮೌಲ್ಯಮಾಪನ ಸಮಿತಿಯು (ಡಿ ಇ ಸಿ) ಈ ಕೆಳಕಂಡವರನ್ನು ಒಳಗೊಂಡಿರುತ್ತದೆ.**

| | | |
|---|---|---|
| 1. | ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಧಾನಕಾರ್ಯದರ್ಶಿಗಳು | ಅಧ್ಯಕ್ಷರು |
| 2. | ಅನುಷ್ಠಾನಗೊಳಿಸುತ್ತಿರುವ ಇಲಾಖೆಯ ಮುಖ್ಯಸ್ಥರು | ಸದಸ್ಯರು |
| 3. | ಹಿರಿಯನಿರ್ದೇಶಕರು, ಮೌಲ್ಯಮಾಪನ ವಿಭಾಗಯೋಜನಾ ಇಲಾಖೆ | ಸದಸ್ಯರು |
| 4. | ಆಂತರಿಕ ಆರ್ಥಿಕ ಸಲಹೆಗಾರರು | ಸದಸ್ಯರು |
| 5. | ಮಾಹಿತಿ ತಂತ್ರಜ್ಞಾನ ಇಲಾಖೆಯ ಪ್ರತಿನಿಧಿ | ಸದಸ್ಯರು |
| 6. | ಸಂಬಂಧಪಟ್ಟ ಇಲಾಖೆಯಲ್ಲಿ ಯೋಜನೆ ಮತ್ತುಮಾನಿಟರಿಂಗ್ ಕಾರ್ಯ ನಿರ್ವಹಿಸುತ್ತಿರುವ ಉಪ ಕಾರ್ಯದರ್ಶಿಗಳು | ಸದಸ್ಯ ಕಾರ್ಯದರ್ಶಿಗಳು |

**ಸಮಿತಿಯ ಪ್ರಕಾರ್ಯಗಳು ಕೆಳಗಿನಂತಿವೆ:**

1. ಮೌಲ್ಯಮಾಪನ ಒಳಪಡಿಸಬೇಕಾದ ಯೋಜನೆ/ಕಾರ್ಯಕ್ರಮಗಳ ಬಗ್ಗೆ ನಿರ್ಧರಿಸುವುದು.
2. ಮೌಲ್ಯಮಾಪನವನ್ನು ಹೊರಗಿನ ಸಂಸ್ಥೆಗಳಿಗೆ ವಹಿಸುವುದು.
3. ಮೌಲ್ಯಮಾಪನ ಸಂಸ್ಥೆಗಳು ತಯಾರಿಸಿದ ಮೌಲ್ಯಮಾಪನ ವರದಿಗಳನ್ನು ಪರಿಶೀಲಿಸಿ ಅಂತಿಮಗೊಳಿಸುವುದು.
4. ಮೌಲ್ಯಮಾಪನ ಅಧ್ಯಯನದಲ್ಲಿನ ಶಿಫಾರಸ್ಸುಗಳನ್ನು ಅಂತಿಮಗೊಳಿಸುವುದು ಹಾಗೂ ಶಿಫಾರಸ್ಸುಗಳ ಮೇಲಿನ ಅನುವರ್ತನಾ ಕ್ರಮಗಳನ್ನು ಸೂಚಿಸುವುದು.
5. ಮೇಲಿನ 4ರಲ್ಲಿ ಅಂತಿಮಗೊಳಿಸಿದ ಅನುವರ್ತನಾ ಕ್ರಮಗಳ ಅನುಷ್ಠಾನದ ಪರಿಶೀಲನೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 1274 ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಪ್ರಾಚ್ಯವಸ್ತು ಸಂಗ್ರಹಾಲಯ ನಿರ್ದೇಶನಾಲಯದ ಅನುದಾನ ಸಂಹಿತೆಗೆ ಒಳಪಟ್ಟಿರುವ ಸಂಸ್ಥೆಗಳಿಗೆ ವಾರ್ಷಿಕ ಅನುದಾನ ನೀಡುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ:26-06-2005ರ ಸರ್ಕಾರದ ಆದೇಶ ಸಂಖ್ಯೆ: ಸಂಕಇ 56 ಸ್ವೀಮರ 2002.
2. ದಿನಾಂಕ: 20-08-2003ರ ಸರ್ಕಾರದ ಆದೇಶ ಸಂಖ್ಯೆ: ಸಂಕಇ 56 ಸ್ವೀಮರ 2002.
3. ದಿನಾಂಕ: 4-02-2004 ಸರ್ಕಾರದ ಅರೆ ಸರ್ಕಾರಿ ಪತ್ರ ಸಂಖ್ಯೆ: ಸಂಕಇ 56 ಸ್ವೀಮರ 2002.
4. ದಿನಾಂಕ: 13-02-2004 ರ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಪತ್ರ ಸಂಖ್ಯೆ: ಕಸನಿ: ಕಸಂ:822:2003-04

**ಪ್ರಸ್ತಾವನೆ:**

ಮೇಲೆ ಉಲ್ಲೇಖ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಪ್ರಾಚ್ಯವಸ್ತು ಸಂಗ್ರಹಾಲಯ ನಿರ್ದೇಶನಾಲಯಗಳ ಅಡಿಯಲ್ಲಿ ವಾರ್ಷಿಕ ಅನುದಾನ ಪಡೆಯುತ್ತಿರುವ ಹಾಗೂ ಅನುದಾನ ಸಂಹಿತೆಗೆ ಒಳಪಟ್ಟಿರುವ ಸಂಸ್ಥೆಗಳಿಗೆ ವಾರ್ಷಿಕ ಅನುದಾನ ನೀಡುವ ಬಗ್ಗೆ ಪ್ರೊ.ಸಿ.ಜಿ.ಕೃಷ್ಣಸ್ವಾಮಿ ಅವರ ಅಧ್ಯಕ್ಷತೆಯಲ್ಲಿ ಪರಿಶೀಲನಾ ತಜ್ಞರ ಸಮಿತಿಯನ್ನು ರಚಿಸಿ ಆ ಸಮಿತಿಯು ಜುಲೈ 2003 ರೊಳಗಾಗಿ ವರದಿಯನ್ನು ಸಲ್ಲಿಸಲು ಆದೇಶಿಸಲಾಗಿತ್ತು. ಮುಂದುವರಿದು ಉಲ್ಲೇಖ (2)ರ ಆದೇಶದಲ್ಲಿ ಸದರಿ ತಜ್ಞರ ಸಮಿತಿಯ ಅವಧಿಯನ್ನು ಕೋರಿಕೆಯ ಮೇರೆಗೆ ಜುಲೈ 2003 ರಿಂದ 40 ದಿನಗಳವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿತ್ತು.

ದಿನಾಂಕ 12.1.2004ರಂದು ಪರಿಶೀಲನಾ ತಜ್ಞರ ಸಮಿತಿಯು ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತದೆ.

ಉಲ್ಲೇಖ (3) ರ ಪತ್ರದಲ್ಲಿ ತಜ್ಞರ ಸಮಿತಿಯ ವರದಿಯ ಶಿಫಾರಸ್ಸುಗಳನ್ನು ಅನುಷ್ಠಾನ ಗೊಳಿಸುವ ಮುನ್ನ ಪ್ರತಿಯೊಂದು ಶಿಫಾರಸ್ಸಿನ ಬಗ್ಗೆ ಸಾಧಕ-ಬಾಧಕಗಳು ಹಾಗೂ ಆರ್ಥಿಕ ಹೊರೆಯನ್ನು ಗಮನದಲ್ಲಿಟ್ಟುಕೊಂಡು ಅಭಿಪ್ರಾಯವನ್ನು ನೀಡುವಂತೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವನ್ನು ಕೋರಲಾಗಿತ್ತು.

ಉಲ್ಲೇಖ (4) ರ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ತನ್ನ ಅಭಿಪ್ರಾಯವನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ.

ಪರಿಶೀಲನಾ ತಜ್ಞರ ಸಮಿತಿಯ ವರದಿಯ ಶಿಫಾರಸ್ಸುಗಳ ಅನುಷ್ಠಾನ ಕುರಿತಂತೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ನೀಡಿರುವ ಅಭಿಪ್ರಾಯವನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 56 ಸ್ವೀಮರ 2002, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಡಿಯಲ್ಲಿ ವಾರ್ಷಿಕ ಅನುದಾನ ಪಡೆಯುತ್ತಿರುವ ಹಾಗೂ ಅನುದಾನ ಸಂಹಿತೆಗೆ ಒಳಪಟ್ಟಿರುವ ಸಂಸ್ಥೆಗಳಿಗೆ ವಾರ್ಷಿಕ ಅನುದಾನ ನೀಡುವ ಕುರಿತಂತೆ ಪ್ರೊ.ಸಿ.ಜಿ.ಕೃಷ್ಣಸ್ವಾಮಿ ಅವರ ಅಧ್ಯಕ್ಷತೆಯಲ್ಲಿ ರಚಿಸಲಾದ ತಜ್ಞರ ಸಮಿತಿಯ ಶಿಫಾರಸ್ಸುಗಳನ್ನು ಪರಿಗಣಿಸಿ ಸರ್ಕಾರವು ಈ ಕೆಳಕಂಡ ಸಂಸ್ಥೆಗಳಿಗೆ ಅನುದಾನ ಸಂಹಿತೆಯಡಿ ಕೆಲಸ ನಿರ್ವಹಿಸುತ್ತಿರುವ ಸಿಬ್ಬಂದಿಗಳು ನಿವೃತ್ತಿಯಾಗುವವರೆಗೆ/ಹುದ್ದೆ ಖಾಲಿಯಾಗುವವರೆಗೆ/ಬೇರೆ ಕಾಯರಗಳಿಂದ ತೆರವಾಗುವವರೆಗೆ ಮಾತ್ರ ವೇತನ ಅನುದಾನವನ್ನು ನೀಡಲು ಹಾಗೂ ಸರ್ಕಾರದ ಅನುಮತಿಯಿಲ್ಲದೆ ಇನ್ನು ಮುಂದೆ ಯಾವುದೇ ಹುದ್ದೆಯನ್ನು ಸೃಜಿಸುವುದಾಗಲೀ ಅಥವಾ ಖಾಲಿ ಹುದ್ದೆಯನ್ನು ತುಂಬುವುದಾಗಲೀ ಮಾಡಕೂಡದು ಎಂದು ಈ ಮೂಲಕ ಆದೇಶಿಸಲಾಗಿದೆ.

1) ನೀನಾಸಮ ರಂಗ ಶಿಕ್ಷಣ ಕೇಂದ್ರ
2) ಕನ್ನಡ ಸಾಹಿತ್ಯ ಪರಿಷತ್ತು
3) ನಾಟಕ ಕರ್ನಾಟಕ ರಂಗಾಯಣ, ಮೈಸೂರು
4) ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ
5) ಕರ್ನಾಟಕ ಜಾನಪದ, ಪರಿಷತ್ತು

ನಾಟಕ ಕರ್ನಾಟಕ ರಂಗಾಯಣ, ಮೈಸೂರು ಇದರ ಆಡಳಿತ ಮತ್ತು ಲೆಕ್ಕಪತ್ರದ ಹೊಣೆಗಾರಿಕೆಯನ್ನು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದಿಂದ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಉಪ ನಿರ್ದೇಶಕರಿಗೆ ನೀಡಲಾಗಿದೆ. ಸದರಿ ಸಂಸ್ಥೆಯು ಸ್ವಾಯತ್ತ ಸಂಸ್ಥೆಯಾಗಿರುವುದರಿಂದ ಮೇಲಿನ ಎಲ್ಲಾ ಕ್ರಮಗಳಿಗೆ ಆಡಳಿತ ಮಂಡಳಿಯಲ್ಲಿ ಒಪ್ಪಿಗೆ ಪಡೆದು ಆನಂತರ ಸರ್ಕಾರದ ಚಾಲ್ತಿ ನಿಯಮದಂತೆ ಕ್ರಮ ತೆಗೆದುಕೊಳ್ಳಲು ಆದೇಶಿಸಲಾಗಿದೆ.

ಮೇಲಿನ ಸಂಘಸಂಸ್ಥೆಗಳಿಗೆ ವೇತನ ಅನುದಾನ ಅಲ್ಲದೆ ಇತರೆ ಸೌಲಭ್ಯಗಳನ್ನು ಕಲ್ಪಿಸುವ ಬಗ್ಗೆ ಪ್ರತ್ಯೇಕವಾಗಿ ಪರಿಶೀಲಿಸಿ ಮುಂದಿನ ಕ್ರಮ ಕೈಗೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 1276 ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಬೆಂಗಳೂರು ಆಯುಕ್ತರ ಕಛೇರಿಯ ಹುದ್ದೆಗಳನ್ನು ದಿನಾಂಕ: 27-8-2005 ರಿಂದ ದಿನಾಂಕ: 26-8-2006 ರವರೆಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 95 ಕೆಎಂಯು 2004, ದಿನಾಂಕ:26-8-2004.

2. ಆಯುಕ್ತರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಇವರ ಪತ್ರ ಸಂಖ್ಯೆ: ಅಪ್ರಾಸಂಪ:ಆಡ:ಹು.ಸೃ:2005-06, ದಿನಾಂಕ: 30-06-2005.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆಯ 10 ಹುದ್ದೆಗಳನ್ನು ಸೃಜಿಸಲಾಗಿದೆ ಹಾಗೂ ಇವುಗಳ ಜೊತೆಗೆ ಇತಿಹಾಸ ತಜ್ಞರು/ಸಂರಕ್ಷಣಾ ವಾಸ್ತು ಶಿಲ್ಪಿ ತಜ್ಞರು ಹಾಗೂ ನಗರ ವಿನ್ಯಾಸ ತಜ್ಞರ ಪ್ರತಿಯೊಂದು ಹುದ್ದೆಗೆ ಒಬ್ಬರಂತೆ ಗುತ್ತಿಗೆ ಆಧಾರದ ಮೇಲೆ ಅಥವಾ ಸಂಚಿತ ಮಾಸಿಕ ವೇತನ ರೂ.16,000-00ಕ್ಕೆ ಸೀಮಿತಗೊಳಿಸಿ ಬಾಹ್ಯ ಮೂಲಗಳಿಂದ ಭರ್ತಿ ಮಾಡಲು ಅವಕಾಶ ಕಲ್ಪಿಸಲಾಗಿದೆ.

ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಇವರು ಸರ್ಕಾರಿ ಆದೇಶ ಸಂಖ್ಯೆ: ಸಂಕಇ 95 ಕೆಎಂಯು 2004 ದಿನಾಂಕ: 26-8-2004 ರಲ್ಲಿ ಮುಂದುವರಿಸಿರುವ 10 ಹುದ್ದೆಗಳನ್ನು ಹಾಗೂ ಇದೇ ಆದೇಶದನ್ವಯ ಗುತ್ತಿಗೆ ಆಧಾರದ ಮೇಲೆ ಅಥವಾ ಸಂಚಿತ ಮಾಸಿಕ ವೇತನ ರೂ.16,000-00ಕ್ಕೆ ಸೀಮಿತಗೊಳಿಸಿ ಬಾಹ್ಯ ಮೂಲಗಳಿಂದ ಭರ್ತಿ ಮಾಡಲು ಅವಕಾಶ ಕಲ್ಪಿಸಲಾಗಿರುವ ಇತಿಹಾಸ ತಜ್ಞರು/ಸಂರಕ್ಷಣಾ ವಾಸ್ತುಶಿಲ್ಪಿ ತಜ್ಞರು ಹಾಗೂ ನಗರ ವಿನ್ಯಾಸ ತಜ್ಞರ ಹುದ್ದೆಗಳನ್ನು ದಿನಾಂಕ: 27-8-2005 ರಿಂದ 26-8-2006ರ ವರೆಗೆ ಮತ್ತೊಂದು ವರ್ಷದ ಅವಧಿಗೆ ಮುಂದುವರಿಸಬೇಕೆಂದು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 203 ಕೆಎಂಯು 2005 ಬೆಂಗಳೂರು, ದಿನಾಂಕ 6ನೇ ಸೆಪ್ಟೆಂಬರ್ 2005**

ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ, ಬೆಂಗಳೂರಿನ ಆಯುಕ್ತರ ಕಛೇರಿಗೆ ಯೋಜನಾಬಾಬಿನಡಿಯಲ್ಲಿ ಮಂಜೂರಾಗಿರುವ ಈ ಕೆಳಗೆ ಕಾಣಿಸಿದ ಹುದ್ದೆಗಳನ್ನು ದಿನಾಂಕ: 27–8–2005 ರಿಂದ 26–8–2006ರ ವರೆಗೆ ಮತ್ತೊಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಿದೆ.

1) ಉಪನಿರ್ದೇಶಕರು – 1 ಹುದ್ದೆ
2) ಆಯುಕ್ತರ ತಾಂತ್ರಿಕ ಸಹಾಯಕ – 1 ಹುದ್ದೆ
3) ಪತ್ರಾಂಕಿತ ವ್ಯವಸ್ಥಾಪಕರು – 1 ಹುದ್ದೆ
4) ಪ್ರಥಮ ದರ್ಜೆ ಸಹಾಯಕರು – 2 ಹುದ್ದೆ
5) ಶೀಘ್ರಲಿಪಿಗಾರರು – 1 ಹುದ್ದೆ
6) ಕಂಪ್ಯೂಟರ್ ಡಾಟಾ ಎಂಟ್ರಿ ಅಪರೇಟರ್ – 1 ಹುದ್ದೆ
7) ವಾಹನ ಚಾಲಕ – 1 ಹುದ್ದೆ
8) ಅಟೆಂಡರ್ – 1 ಹುದ್ದೆ
9) ಗ್ರೂಪ್ ' ಡಿ ' – 1 ಹುದ್ದೆ

ಇತಿಹಾಸ ತಜ್ಞರ/ಸಂರಕ್ಷಣಾ ವಾಸ್ತುಶಿಲ್ಪ ತಜ್ಞರ ಹಾಗೂ ನಗರ ವಿನ್ಯಾಸ ತಜ್ಞರ ಪ್ರತಿಯೊಂದು ಹುದ್ದೆಗೆ ಒಬ್ಬರಂತೆ ಗುತ್ತಿಗೆ ಆಧಾರದ ಮೇಲೆ ಅಥವಾ ಸಂಚಿತ ಮಾಸಿಕ ರೂ.16,000–00 ವೇತನಕ್ಕೆ ಸೀಮಿತಗೊಳಿಸಿ ಬಾಹ್ಯ ಮೂಲಗಳಿಂದ ಭರ್ತಿ ಮಾಡಲು ಅವಕಾಶ ಕಲ್ಪಿಸಿ ಆದೇಶಿಸಿರುವ ಹುದ್ದೆಗಳನ್ನು ದಿನಾಂಕ: 27–8–2005 ರಿಂದ 26–8–2006ರ ವರೆಗೆ ಒಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 1273 ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ರಾಜ್ಯ ಸರ್ಕಾರಿ ನೌಕರರಿಗೆ "ಆರೋಗ್ಯ ಭಾಗ್ಯ" ಯೋಜನೆಯ ಅನುಷ್ಠಾನ ಕುರಿತು.

**ಪ್ರಸ್ತಾವನೆ:**

ಪ್ರಸ್ತುತ ಸರ್ಕಾರಿ ನೌಕರರ ವೈದ್ಯಕೀಯ ವೆಚ್ಚಗಳನ್ನು ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 ಇದರಡಿ ತುಂಬಿಕೊಡಲಾಗುತ್ತದೆ. ಆದರೆ ನಿಯಮಗಳಡಿ ನಿಗದಿಪಡಿಸಲಾದ ದರಗಳು ವಿಭಿನ್ನವಾಗಿರುವುದರಿಂದ ನೌಕರರು ಮಾಡುವ ಪೂರ್ಣ ವೆಚ್ಚವನ್ನು ತುಂಬಿಕೊಡಲಾಗುತ್ತಿಲ್ಲ ಮತ್ತು ಈ ನಿಯಮಗಳಡಿ ಕೆಲವೊಂದು ಬಾಬ್ತುಗಳಿಗೆ ಅನುಮತಿ ನೀಡುವುದಿಲ್ಲ. ಆದ್ದರಿಂದ ರಾಜ್ಯ ಸರ್ಕಾರಿ ನೌಕರರಿಗೆ ಉತ್ತಮ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುವ ದೃಷ್ಟಿಯಿಂದ "ಆರೋಗ್ಯ ಭಾಗ್ಯ" ಎಂಬ ಒಂದು ವಿಶೇಷ ಯೋಜನೆಯನ್ನು ರೂಪಿಸುವ ಅಗತ್ಯವಿದೆಯೆಂದು ಸರ್ಕಾರಿ ಅಭಿಪ್ರಾಯಪಟ್ಟಿದೆ. ಪ್ರಸ್ತುತ ಕರ್ನಾಟಕ ಸರ್ಕಾರವು ಪೋಲೀಸ್ ಇಲಾಖೆಯಲ್ಲಿ "ಆರೋಗ್ಯ ಭಾಗ್ಯ" ಎಂದು ಕರೆಯಲಾಗುವ ಒಂದು ಆರೋಗ್ಯ ವಿಮಾ ಯೋಜನೆಯನ್ನು ಕಾರ್ಯಗತಗೊಳಿಸಿದ್ದು, ಅದು ಅತ್ಯುತ್ತಮವಾಗಿ ಕಾರ್ಯನಿರ್ವಹಿಸುತ್ತದೆ. ರಾಜ್ಯ ಸರ್ಕಾರದ ಇತರ ಎಲ್ಲಾ ನೌಕರರ ಅನುಕೂಲಕ್ಕಾಗಿ ಅಂಥದೇ ಒಂದು ಯೋಜನೆಯನ್ನು ಅಳವಡಿಸಿಕೊಳ್ಳಲು ಉದ್ದೇಶಿಸಲಾಗಿದೆ.

2. ಪ್ರಸ್ತಾಪಿತ ಯೋಜನೆಯು ಸಂಪೂರ್ಣವಾಗಿ ಐಚ್ಛಿಕವಾಗಿದೆ. ಪ್ರಸ್ತಾಪಿತ ಯೋಜನೆ ಅಡಿ ಯೋಜನೆಯನ್ನು ಆಯ್ಕೆ ಮಾಡಿಕೊಂಡು, ಅದರ ಸದಸ್ಯರಾಗ ಬಯಸುವ ಎಲ್ಲಾ ನೌಕರರು ತಮ್ಮ ಕುಟುಂಬದ ಪ್ರತಿಯೊಬ್ಬ ಸದಸ್ಯರಿಗೆ ತಿಂಗಳಿಗೆ 10 ರೂಪಾಯಿಗಳನ್ನು ಸಂದಾಯ ಮಾಡುವುದು ಅಗತ್ಯವಾಗಿದ್ದು ಹಾಗೆ ಸಂದಾಯ ಮಾಡುವ ನೌಕರರು ಮತ್ತು ಅವರ ಕುಟುಂಬದ ಸದಸ್ಯರು ಈ ಯೋಜನೆಯ ವ್ಯಾಪ್ತಿಯಲ್ಲಿ ಬಂದಂತಾಗುತ್ತದೆ. ಯೋಜನೆಯು ಕರ್ನಾಟಕ ರಾಜ್ಯ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 ಇದರೊಂದಿಗೆ ಸಮವರ್ತಿಯಾಗಿ ಕಾರ್ಯನಿರ್ವಹಿಸುತ್ತದೆ. ನಿಯಮಗಳ ಪ್ರಕಾರ ಅಂಗೀಕಾರಾರ್ಹ ವೆಚ್ಚಗಳನ್ನು ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವಂತೆ ಸರ್ಕಾರವೇ ಸಂದಾಯ ಮಾಡುತ್ತಿರುವುದರಿಂದ, ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 ಇದರಡಿ ಅಂಗೀಕಾರರ್ಹವಾಗದ ವೆಚ್ಚಗಳನ್ನು ನೌಕರರು ಸಂದಾಯ ಮಾಡುತ್ತಿರುವ ಪ್ರೀಮಿಯಂನಿಂದ ಭರಿಸಲಾಗುವುದು.

3. ಒಂದು ನ್ಯಾಸವನ್ನು ಸ್ಥಾಪಿಸಿ, ಆಸ್ಪತ್ರೆಗಳ ಆಯ್ಕೆ ಮತ್ತು ವೈದ್ಯಕೀಯ ವೆಚ್ಚಗಳನ್ನು ತುಂಬಿಕೊಡುವುದೂ ಸೇರಿದಂತೆ ಯೋಜನೆಯನ್ನು ನಿರ್ವಹಿಸಲು ಒಂದು ನೋಡಲ್ ಏಜನ್ಸಿಯನ್ನು ನೇಮಕ ಮಾಡುವಂತೆ ಪ್ರಸ್ತಾಪಿಸಲಾಗಿದೆ.

4. ನ್ಯಾಸವನ್ನು ಸ್ಥಾಪಿಸಿದ ತರುವಾಯ, ಯೋಜನೆಯು ಜಾರಿಗೆ ಬರುತ್ತದೆ. ಈ ಸಂದರ್ಭದಲ್ಲಿ ರಾಜ್ಯ ಸರ್ಕಾರವು, ರಾಜ್ಯ ಸರ್ಕಾರಿ ನೌಕರರ ಅನುಕೂಲಕ್ಕಾಗಿ "ಆರೋಗ್ಯ ಭಾಗ್ಯ" ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಲು ತೀರ್ಮಾನಿಸಿದೆ. ಆದುದರಿಂದ, ಈ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ 439 ಸಿಜಿಇ 04, ಬೆಂಗಳೂರು ದಿನಾಂಕ: 11ನೇ ಜುಲೈ 2005**

ಈ ಯೋಜನೆಯ ಸದಸ್ಯರಾಗಬಯಸುವ ರಾಜ್ಯ ಸರ್ಕಾರಿ ನೌಕರರಿಗೆ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುವ "ಆರೋಗ್ಯ ಭಾಗ್ಯ" ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಲು ಸರ್ಕಾರವು ಒಪ್ಪಿಗೆ ನೀಡಿದೆ. ಈ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವು ಒಂದು ನ್ಯಾಸವನ್ನು ಸ್ಥಾಪಿಸಿದ ತರುವಾಯ ಈ ಯೋಜನೆಯು ಜಾರಿಗೆ ಬರುವುದು. ಯೋಜನೆಯ ಪ್ರಮುಖ ಲಕ್ಷಣಗಳು ಈ ಮುಂದಿನಂತಿವೆ:

1. ಎ ಇಂದ ಡಿ ದರ್ಜೆಯ ಎಲ್ಲಾ ರಾಜ್ಯ ಸರ್ಕಾರಿ ನೌಕರರೂ ಸಂದರ್ಭಾನುಸಾರ ತಾವು ತನ್ನ ಪತಿ:ಪತ್ನಿ ತನ್ನ ಅವಲಂಬಿತ ಮಕ್ಕಳು ಮತ್ತು ತಂದೆ ತಾಯಿ ಸೇರಿದಂತೆ ಪ್ರತಿ ತಿಂಗಳಿಗೆ ಕುಟುಂಬದ ಪ್ರತಿ ಸದಸ್ಯರಿಗೆ ಮಾಸಿಕ 10.00ರೂಪಾಯಿಗಳ ವಂತಿಗೆಯನ್ನು ಸಂದಾಯ ಮಾಡುವ ಮೂಲಕ ಯೋಜನೆಗೆ ಸ್ವಯಂ ಇಚ್ಚೆಯಿಂದ ಚಂದಾದಾರರಾಗಬಹುದು.
2. ಈ ಯೋಜನೆಗೆ ಸಂಬಂಧಿಸಿದ ವಂತಿಗೆಯನ್ನು ನೌಕರರ ವೇತನದಿಂದ ಸಂಗ್ರಹ ಮಾಡಲಾಗುವುದು.
3. ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಟೆಂಡರು ಕರೆಯುವ ಪ್ರಕ್ರಿಯೆಯ ಮೂಲಕ ನೇಮಕ ಮಾಡಲಾದ ತೃತಿಕ ಪೊಕ್ಷಕಾರ ಏಜೆನ್ಸಿಯು (ಟಿಪಿಎ) ಸರ್ಕಾರವು ಮಾನ್ಯತೆ ಮಾಡಿರುವ ಎಲ್ಲಾ ಖಾಸಗಿ ಆಸ್ಪತ್ರೆಗಳಲ್ಲಿ ನಗದು ರಹಿತ ಹಣ ಸಲ್ಲಿಸಿದೆ. ಚಿಕಿತ್ಸೆ ಪಡೆಯಲು ಅವರಿಗೆ ಸಾಧ್ಯವಾಗುವಂತೆ ನೌಕರರು ಮತ್ತು ಇತರೆ ಕುಟುಂಬದ ಸದಸ್ಯರಿಗೆ ಗುರುತಿನ ಚೀಟಿಯನ್ನು ನೀಡುವುದು.
4. ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 ಇದರಡಿ ಅನುಮತಿಸಬಹುದಾದ ಎಲ್ಲಾ ವೆಚ್ಚಗಳನ್ನು ತುಂಬಿಕೊಡಲಾಗುವುದು ಮತ್ತು ಅದರಡಿ ಅನುಮತಿಸಲಾಗದ ಬಾಬ್ತುಗಳಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ ವಿಶೇಷ ಮಂಜೂರಾತಿ ನೀಡಿ ಅವುಗಳಿಗೆ ನೌಕರರಿಂದ ಸಂಗ್ರಹಿಸಲಾದ ಪ್ರೀಮಿಯಂನಿಂದಲೇ ಹಣ ಸಂದಾಯ ಮಾಡುವುದು.
5. ನೌಕರರ ಕಚೇರಿಯ ಸಂಬಂಧಪಟ್ಟ ಮುಖ್ಯಸ್ಥರಿಂದ ವೈದ್ಯಕೀಯ ಕ್ಲೈಮುಗಳನ್ನು ತುಂಬಿಕೊಡುವುದಕ್ಕೊಳಪಟ್ಟು ಪ್ರಾರಂಭಿಕವಾಗಿ ನ್ಯಾಸದ ನಿಧಿಯಿಂದ ನೇರವಾಗಿ ಎಲ್ಲಾ ಕ್ಲೈಮುಗಳನ್ನು ಇತ್ಯರ್ಥ ಪಡಿಸುವುದು.
6. ಈ ಸೌಲಭ್ಯವನ್ನು ಒಳರೋಗಿ ಚಿಕಿತ್ಸೆ, ಹೊರರೋಗಿ ವಿಭಾಗ (ಒಪಿಡಿ) ಸಮಾಲೋಚನೆ ಮತ್ತು ತಪಾಸಣೆಗಳಿಗೂ ಸಹ ಒದಗಿಸಲಾಗುವುದು.
7. ಮೇಲ್ಕಂಡ ಯೋಜನೆಗೆ ಚಂದಾದಾರರಾದ ಸರ್ಕಾರಿ ನೌಕರರು ಸರ್ಕಾರಿ ಆಸ್ಪತ್ರೆಗಳಿಂದ ಉಚಿತ ಚಿಕಿತ್ಸೆಯನ್ನು ಪಡೆಯಬಹುದಲ್ಲದೆ ಹಾಲಿ ಇರುವ ವ್ಯವಸ್ಥೆಯ ಪ್ರಕಾರ ಆತನ ಸಂಬಂಧಪಟ್ಟ ಕಚೇರಿಯ ಮುಖ್ಯಸ್ಥರ ಮೂಲಕ ಸರ್ಕಾರಿ ಆಸ್ಪತ್ರೆಗಳು ಒದಗಿಸದ ಔಷಧ ವೆಚ್ಚವನ್ನು ಸಹ ಮರಳಿ ಪಡೆಯಬಹುದು.
8. ಮೇಲ್ಕಂಡ ಯೋಜನೆಯ ಚಂದಾದಾರರಾಗದ ಸರ್ಕಾರಿ ನೌಕರರ ಸಂಬಂಧದಲ್ಲಿ ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರು ಅವರ ಪರಿಶೀಲನೆಗಾಗಿ ಖಾಸಗಿ ಆಸ್ಪತ್ರೆಗಳಿಂದ ಬಂದ ವೈದ್ಯಕೀಯ ಕ್ಲೈಮುಗಳನ್ನು ಮೇಲ್ಕಂಡ ಟಿ.ಪಿ.ಎ.ಗೆ ಕಳುಹಿಸಬಹುದು ಮತ್ತು ಟಿ.ಪಿ.ಎ.ಯು ಕ್ಲೈಮುಗಳನ್ನು ಪರಿಶೀಲಿಸಬೇಕು ಮತ್ತು ಟಿ.ಪಿ.ಎ.ಯ ಮೇಲ್ಕಂಡ ಪರಿಶೀಲನೆಗನುಸಾರವಾಗಿ ಕ್ಲೈಮುಗಳನ್ನು ಇತ್ಯರ್ಥ ಪಡಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್.ಶಂಕರ್**

ಪಿ.ಆರ್. 1309

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಂ. ಪುಟ್ಟಸ್ವಾಮಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಬಸವೇಶ್ವರ ನಗರ, ಬೆಂಗಳೂರು ಉತ್ತರ ತಾಲ್ಲೂಕು ಮತ್ತು ಹಾಲಿ ಹಿರಿಯ ಉಪ ನೋಂದಣಾಧಿಕಾರಿ, ನೆಲಮಂಗಲ ಬೆಂಗಳೂರು(ಗ್ರಾಮಾಂತರ) ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಬಗ್ಗೆ ಕಾನೂನು ಕ್ರಮ ಜರುಗಿಸಲು ಮಂಜೂರಾತಿ ಕುರಿತು.

**ಓದಲಾಗಿದೆ:**
1. ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರಸಂಖ್ಯೆ:ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ. 36/2002, ದಿನಾಂಕ:28-10-2003.
2. ಸರ್ಕಾರದ ಸಮ ಸಂಖ್ಯೆಯ ಆದೇಶ ದಿನಾಂಕ:2-8-2004.
3. ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಪತ್ರ ಸಂಖ್ಯೆ:ಲೋಕ/ಐಎನ್‌ವಿ(ಜಿ)/ಸಿಟಿ/ಕ್ರೈಂ/36/2002, ದಿನಾಂಕ:16-9-2004.
4. ಸಮ ಸಂಖ್ಯೆಯ ಆದೇಶದ ದಿನಾಂಕ:29-3-2005.
5. ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)ಸಿಟಿ /ಕ್ರೈಂ-36/02, ದಿನಾಂಕ:12-4-2005.

ಪ್ರಸ್ತಾವನೆ:-

ಮೇಲೆ ಓದಲಾದ ದಿನಾಂಕ:28-10-2003ರ ಪತ್ರದಲ್ಲಿ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶ್ರೀ ಎಂ. ಪುಟ್ಟಸ್ವಾಮಿ, (ಹಿಂದಿನ) ಹಿರಿಯ ಉಪ ನೋಂದಣಾಧಿಕಾರಿ, ಬಸವೇಶ್ವರ ನಗರ, ಬೆಂಗಳೂರು ಉತ್ತರ ತಾಲ್ಲೂಕು ಇವರು ಫಿರ್ಯಾದುದಾರರಾದ ಶ್ರೀ ಶಿವಕುಮಾರ್, ಅಡ್ವೋಕೇಟ್, ರಾಜಾಜಿನಗರ, ಬೆಂಗಳೂರು ಇವರ ಮೂಲಕ ಶ್ರೀ ಲಾರೆನ್ಸ್ ಡಾಮ್ನಿಕ್ ಪಿಂಟೋ, ಬಿನ್ ಲೋವಿಯನ್ ಪಿಂಟೋ, ನಂ.2132, 8ನೇ ಮುಖ್ಯ ರಸ್ತೆ,`ಡಿ` ಬ್ಲಾಕ್ 2ನೇ ಹಂತ, ರಾಜಾಜಿನಗರ, ಬೆಂಗಳೂರು ಇವರ ಸ್ವಾಧೀನಾನುಭವದಲ್ಲಿರುವ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ ಹಂದರಹಳ್ಳಿ ಗ್ರಾಮದ ನಿವೇಶನ ಸಂಖ್ಯೆ:76 ನ್ನು ಶ್ರೀಮತಿ ಆರ್. ಜಯಲಕ್ಷ್ಮೀ ಕೋಂ ಶ್ರೀ ಚನ್ನಗಂಗಯ್ಯ, ನಂ.41, 1 ನೇ ಮುಖ್ಯ ರಸ್ತೆ, ಪಾಪಯ್ಯ ಗಾರ್ಡನ್, ಕೆ.ಹೆಚ್.ಬಿ. ಕಾಲೋನಿ, ಬೆಂಗಳೂರು 79 ರಲ್ಲಿ ವಾಸವಾಗಿರುವ ಇವರು ಮತ್ತು ಇದೇ ಮೇಲ್ಕಂಡ ಸದರಿ ಲಾರೆನ್ಸ್ ಡಾಮ್ನಿಕ್ ಪಿಂಟೋರವರ ಮತ್ತೊಂದು ನಿವೇಶನ ಸಂಖ್ಯೆ:75ನ್ನು ಶ್ರೀ ಜಿ. ಸ್ವಾಮಿ ಬಿನ್ ದಿವಂಗತ ಶ್ರೀ ಗಂಗಪ್ಪ ನಂ. 19, ಅನಂತ ನಿಲಯ, 3ನೇ ಕ್ರಾಸ್, ಜಾರಕ ಬಂಡೆ ಕಾವಲ್, ಗಣೇಶ ಬ್ಲಾಕ್, ಮಹಾಲಕ್ಷ್ಮಿ ಬಡಾವಣೆ, ಬೆಂಗಳೂರು-96 ರಲ್ಲಿ ವಾಸವಾಗಿರುವ ಇವರು ಶುದ್ಧ ಕ್ರಯಕ್ಕೆ ಖರೀದಿಸಿದ್ದು, ಮೇಲ್ಕಂಡ ಸದರಿ ನಿವೇಶನ ಗಳನ್ನು ನೋಂದಣಿ ಮಾಡಲು ಪ್ರತಿ ನಿವೇಶನಕ್ಕೆ ರೂ.1,500/-ರಂತೆ ಒಟ್ಟು ಎರಡು ನಿವೇಶನಗಳ ನೋಂದಣಿಗೆ ಅಕ್ರಮ ಸಂಭಾವನೆಯಾಗಿ ರೂ. 3,000/- ಗಳನ್ನು ದಿನಾಂಕ:

23-10-2002ರಂದು ಪಡೆಯುತ್ತಿದ್ದಾಗ ಲೋಕಾಯುಕ್ತರು ಬೀಸಿದ ಬಲೆಗೆ ಸಿಕ್ಕಿ ಬಿದ್ದಿರುವುದರಿಂದ, ಸದರಿಯವರ ವಿರುದ್ಧ ಲಂಚ ನಿರೋಧ ಕಾಯ್ದೆ, 1988ರ ಕಲಂ-7,13(1)(ಡಿ) ಮತ್ತು ಕಲಂ 13(2) ರಡಿಯಲ್ಲಿ ಕ್ರಮ ಜರುಗಿಸಲು ಅಭಿಯೋಜನಾ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ(2)ರ ಆದೇಶದಲ್ಲಿ ಶ್ರೀ ಎಂ. ಪುಟ್ಟಸ್ವಾಮಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಬಸವೇಶ್ವರ ನಗರ, ಬೆಂಗಳೂರು ಉತ್ತರ ತಾಲ್ಲೂಕು, ಮತ್ತು ಹಾಲಿ ಹಿರಿಯ ಉಪ ನೋಂದಣಾಧಿಕಾರಿ, ನೆಲಮಂಗಲ ಉಪ ನೋಂದಣಿ ಕಛೇರಿ, ಬೆಂಗಳೂರು(ಗ್ರಾಮಾಂತರ) ಜಿಲ್ಲೆ, ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡಲಾಗಿತ್ತು, ಆದರೆ ಮೇಲೆ ಓದಲಾದ(3)ರ ಪತ್ರದಲ್ಲಿ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಇವರು ಸದರಿ ಆದೇಶದ ಪತ್ರವನ್ನು ಅವಲೋಕಿಸಲಾಗಿ, ಪ್ರಸ್ತಾವನೆಯ ಮೊದಲ ಭಾಗದಲ್ಲಿ ಅರೋಪಿತರು ಫಿರ್ಯಾದುದಾರರಿಂದ ಲಂಚದ ಹಣವನ್ನು ಪಡೆದ ಬಗ್ಗೆ ಸಂಕ್ಷಿಪ್ತವಾಗಿ ನಮೂದಿಸಿದ್ದು, ತದನಂತರ ಮುಂದಿನ ಭಾಗದಲ್ಲಿ, ನೇರವಾಗಿ ಆರೋಪಿತರನ್ನು ಅಭಿಯೋಜನೆ ಗೊಳಪಡಿಸಲು ಮಂಜೂರಾತಿಯನ್ನು ನೀಡಿದ್ದು, ಆದೇಶ ಪತ್ರದಲ್ಲಿರಬೇಕಾಗಿದ್ದ ಬಹು ಮುಖ್ಯವಾದ ಎರಡು ಘಟಕಗಳು, ಅರ್ಥಾತ್ (i) ಸಕ್ಷಮ ಪ್ರಾಧಿಕಾರಿಯು ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿರುವುದಾಗಿಯೂ, ಮತ್ತು (ii) ಮನವರಿಕೆ ಮಾಡಿಕೊಂಡ ನಂತರವೇ ಅಭಿಯೋಜನೆಗೆ ಒಳಪಡಿಸಬೇಕೆಂಬ ವಿಚಾರಕ್ಕೆ ಬರಲಾಯಿತು ಎಂಬುದನ್ನು ಪ್ರಸ್ತಾಪಿಸಿರುವುದಿಲ್ಲ. ಸಕ್ಷಮ ಪ್ರಾಧಿಕಾರವು ಯಾವ ಯಾವ ದಾಖಲಾತಿಗಳನ್ನು ಪರಿಶೀಲಿಸಿತು ಹಾಗೂ ಯಾವ ಯಾವ ಅಂಶಗಳು ಆ ದಾಖಲಾತಿಗಳಿಂದ ಹೊರಪಟ್ಟವು ಎಂಬ ಬಗ್ಗೆ ಮಂಜೂರಾತಿ ಆದೇಶದ ಯಾವ ಭಾಗದಲ್ಲಿಯೂ ವಿಶ್ಲೇಷಿಸಿರುವುದಿಲ್ಲ. ಅಲ್ಲದೆ ಮಂಜೂರಾತಿ ನೀಡುವ ಮೊದಲು, ತನಿಖಾ ದಾಖಲಾತಿಗಳು ಯಾರಿಂದ ಪರಿಶೀಲಿಸಲ್ಪಟ್ಟಿತು ಎಂಬ ಬಗ್ಗೆ ಆದೇಶ ಪತ್ರದಲ್ಲಿ ನಮೂದಿಸಿರುವುದಿಲ್ಲವೆಂದೂ ಹಾಗೂ ಮಾನ್ಯ ಸರ್ವೋಚ್ಛ ಹಾಗೂ ರಾಜ್ಯದ ಉಚ್ಛ ನ್ಯಾಯಾಲಯಗಳ ತೀರ್ಮಾನಗಳ ಪ್ರಕಾರ, ಸಕ್ಷಮ ಪ್ರಾಧಿಕಾರವು ತನಿಖಾ ಕಾಲದಲ್ಲಿ ಸಂಗ್ರಹಿಸಿರುವ ಸಾಕ್ಷ್ಯಗಳನ್ನು ಮನದಟ್ಟು ಮಾಡಿಕೊಳ್ಳತಕ್ಕದ್ದು ಮತ್ತು ಸದರಿ ಸಾಕ್ಷ್ಯವು ಸಾರ್ವಜನಿಕ ನೌಕರನ ವಿರುದ್ಧ ಪ್ರಕರಣವನ್ನು ಸಾಬೀತು ಮಾಡಲು ಸಹಕಾರಿಯಾಗುವುದೇ ಎಂಬ ಬಗ್ಗೆ ಸ್ವತಂತ್ರವಾಗಿ ಅಭಿಪ್ರಾಯಿಸಬೇಕಾಗಿರುತ್ತದೆ ಎಂದು ತಿಳಿಸಿ, ಸಕ್ಷಮ ಪ್ರಾಧಿಕಾರವು, ತನಿಖಾ ಪಾರುಪತ್ಯದವರು ತನಿಖಾ ಕಾಲದಲ್ಲಿ ಸಂಗ್ರಹಿಸಿರುವ ಎಲ್ಲಾ ಸಾಕ್ಷ್ಯಗಳನ್ನು ಅವಲೋಕಿಸಬೇಕಾಗಿದ್ದು, ಹಾಗೂ ಸಾರ್ವಜನಿಕ ನೌಕರನ ವಿರುದ್ಧ ಮಾಡಲಾದ ಅಪಾದನೆಗಳು ಸರಿಯಾಗಿ ಆಧಾರಿತವಾಗಿವೆ ಎಂಬ ಬಗ್ಗೆ ಕಾರಣಗಳನ್ನು ದಾಖಲಿಸಬೇಕಾಗಿರುತ್ತದೆಯೆಂದು, ಒಂದು ವೇಳೆ ವಿವೇಚನೆಯನ್ನು ಬಳಸದೇ ಹಾಗೂ ಯಾಂತ್ರಿಕವಾಗಿ ಮಂಜೂರಾತಿಯನ್ನು ನೀಡಿದಲ್ಲಿ, ಅಂತಹ ಅದೇಶವು ನ್ಯಾಯಾಲಯದಲ್ಲಿ ಅಸಿಂಧುವಾಗುವುದೆಂದು ಸಹ ಸರ್ವೋಚ್ಚ ನ್ಯಾಯಾಲಯವು ಅಭಿಪ್ರಾಯಪಟ್ಟಿರುತ್ತದೆ ಎಂದು ತಿಳಿಸಿ ಇಂತಹ ನಕಲು ಪ್ರತಿಗಳನ್ನು ನ್ಯಾಯಾಲಯವು ಪರಿಗಣಿಸುತ್ತಿಲ್ಲವಾದ್ದರಿಂದ ಕಛೇರಿಯ ಮೊಹರನ್ನು ಒಳಗೊಂಡಂತೆ ಮಂಜೂರಾತಿ ಅದೇಶ ಪತ್ರದ ಮೂಲ ಪ್ರತಿಯು ಅವಶ್ಯಕವಾಗಿರುತ್ತದೆಯೆಂದೂ ಸಹ ತಿಳಿಸಿ ದಿನಾಂಕ: 2-8-2004ರ ಆದೇಶದ ಪ್ರತಿಯನ್ನು ಹಿಂತಿರುಗಿಸುತ್ತಾ ಸಕ್ಷಮ ಪ್ರಾಧಿಕಾರಿಯ ಶಾಯಿಸಹಿ ಹಾಗೂ ಕಛೇರಿಯ ಮೊಹರನ್ನು ಒಳಗೊಂಡಂತೆ ಅವರ ಪತ್ರದೊಂದಿಗೆ ಲಗತ್ತಿಸಿರುವ ಮಂಜೂರಾತಿ ಆದೇಶ ಪತ್ರದ ಪ್ರತಿಯನ್ನು ಕಳುಹಿಸಿಕೊಡುವಂತೆ ಕೋರಿರುತ್ತಾರೆ.

ದಿನಾಂಕ:2-8-2004ರ ಸರ್ಕಾರದ ಅದೇಶವನ್ನು ಮಾರ್ಪಾಡಿಸುವ ಬಗ್ಗೆ ಕಾನೂನು ಇಲಾಖೆಯೊಂದಿಗೆ ಸಮಾಲೋಚಿಸಲಾಗಿದ್ದು, ಲೋಕಾಯುಕ್ತರವರು ನೀಡಿರುವ ಮಾದರಿಯನ್ವಯ ಸರ್ಕಾರಿ ಆದೇಶ ಮಾರ್ಪಡಿಸುವ ಅಗತ್ಯತೆ ಇರುವುದಿಲ್ಲವೆಂಬ ಅಭಿಪ್ರಾಯಕ್ಕೆ ಬರಲಾಯಿತಾದರೂ ಸಕ್ಷಮ ಪ್ರಾಧಿಕಾರಿಯು ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಮನವರಿಕೆ ಮಾಡಿಕೊಂಡ ನಂತರವೇ ಅಭಿಯೋಜನೆಗೆ ಒಳಪಡಿಸಬೇಕೆಂಬ ತೀರ್ಮಾನಕ್ಕೆ ಬರಲಾಗಿದೆ ಎಂಬ ವಾಕ್ಯ ಬರಬೇಕೆಂಬ ತೀರ್ಮಾನಕ್ಕೆ ಬಂದ ಕಾರಣ ದಿನಾಂಕ:2-8-2004ರ ಅದೇಶವನ್ನು ಮೇಲೆ ಓದಲಾದ ದಿನಾಂಕ:29-3-2005 ರ ಆದೇಶದಲ್ಲಿ ಹಿಂತೆಗೆದುಕೊಂಡು, ಅಂದೇ ಪರಿಷ್ಕೃತ ಆದೇಶವನ್ನು ಸಹ ಹೊರಡಿಸಲಾಗಿತ್ತು. ಆದರೆ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ತಮ್ಮ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)ಸಿಟಿ/ಕ್ರೈಂ-36/-02-03 ದಿನಾಂಕ:12-4-2005 ರ ಪತ್ರದಲ್ಲಿ ದಿನಾಂಕ: 29-3-2005 ರ ಆದೇಶವನ್ನು ಹಿಂತಿರುಗಿಸುತ್ತಾ ಪುಟ-3 ಕಂಡಿಕೆ-2ರ ಕೊನೆಯವರೆಗೆ ಸಮರ್ಪಕವಾಗಿದ್ದು, ಆನಂತರದ ಆದೇಶವು ತೀರಾ ಸಂಕ್ಷಿಪ್ತವಾಗಿದ್ದು, ಆತುರದಲ್ಲಿ ಪೂರ್ಣಗೊಳಿಸಿದಂತೆ ಕಂಡುಬರುತ್ತಿದೆಯೆಂದು ತಿಳಿಸಿ, ಯಾವ ಯಾವ ದಾಖಲೆಗಳನ್ನು ಪರಿಶೀಲಿಸಿದೆ ಎಂಬ ಬಗ್ಗೆ ಪಟ್ಟಿ ಮಾಡಿಲ್ಲ, ಹಾಗೂ ಫಿರ್ಯಾದುದಾರರ ಅರ್ಜಿ, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಟ್ರ್ಯಾಪ್ ಮಹಜರ್, ರಾಸಾಯನಿಕ ಪರೀಕ್ಷಕರ ಪರೀಕ್ಷಾವರದಿ ಮುಂತಾದ ದಾಖಲೆಗಳನ್ನು ಮತ್ತು ಕಡತಗಳನ್ನು ಪರಿಶೀಲಿಸಲಾಗಿದೆಯೆಂದು ನಮೂದಿಸಬೇಕಾಗಿದೆ ಎಂದು ದಾಖಲೆಗಳಿಂದ ಸ್ಪಷ್ಟವಾಗುವ ಪ್ರಕರಣದ ವಾಸ್ತವಾಂಶ ಗಳನ್ನು ವಿವರಿಸುವುದು ಅವಶ್ಯಕವೆಂದು, ವಿಶ್ಲೇಷಣೆಯಿಂದ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುವ ಬಗ್ಗೆ ಮನವರಿಕೆ ಯಾಗಿದ್ದನ್ನು ಕುರಿತು ಸ್ಪಷ್ಟವಾಗಿ ನಮೂದಿಸುವುದು ಅವಶ್ಯಕ ಎಂದು ತಿಳಿಸಿ ದೋಷರಹಿತವಾದ ಹಾಗೂ ಸಮಂಜಸವಾದ ಅಭಿಯೋಜನಾ ಮಂಜೂರಾತಿ ಆದೇಶವನ್ನು ನೀಡಬೇಕೆಂದು ಕೋರಿರುತ್ತಾರೆ.

ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ರವರ ದಿನಾಂಕ: 12-4-2005 ರ ಪತ್ರದಂತೆ ಪರಿಶೀಲಿಸಲಾಗಿ, ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರಕ್ಕೆ ಮೂಲ ದಾಖಲೆಗಳನ್ನು ಒದಗಿಸದೆ ಛಾಯಾ ಪ್ರತಿಗಳನ್ನು ಒದಗಿಸಿದ್ದರಿಂದ ಪರಿಶೀಲನೆಗಾಗಿ ಮೂಲ ದಾಖಲೆಗಳನ್ನು ಒದಗಿಸಿ ಆದೇಶದ ಭಾಗದಲ್ಲಿ ನಮೂದಿಸಬೇಕಾಗಿರುವ ದಾಖಲಾತಿಗಳ ಪಟ್ಟಿಯನ್ನು ತಿಳಿಸುವಂತೆ ದಿನಾಂಕ; 24-6-2005 ರ ಪತ್ರದಲ್ಲಿ ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರನ್ನು ಕೋರಲಾಗಿತ್ತು ಹಾಗೂ ದಿನಾಂಕ: 18-7-2005 ಮತ್ತು ದಿನಾಂಕ: 19-8-2005 ರ ಪತ್ರಗಳಲ್ಲಿ ಜ್ಞಾಪಿಸಲಾಗಿತ್ತು.

ಲೋಕಾಯುಕ್ತ ಕಛೇರಿಯವರು ದಿನಾಂಕ: 26-8-2005 ರಂದು ಸರ್ಕಾರದಲ್ಲಿ ಹಾಜರಾಗಿ ಈ ಕೆಳಕಂಡ ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ಒಳಪಡಿಸಿರುತ್ತಾರೆ.

**ದಾಖಲಾತಿಗಳು**

1. ಫಿರ್ಯಾದಿ ಶ್ರೀ ಶಿವಕುಮಾರ್, ಅಡ್ವೋಕೇಟ್, ನಂ.1098, 1ನೇ ಮಹಡಿ, 3ನೇ ಮುಖ್ಯರಸ್ತೆ,2ನೇ ಹಂತ, ಇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10, ರವರ ದೂರು ದಿನಾಂಕ:23–10–2002.
2. ಪ್ರಥಮ ವರ್ತಮಾನ ವರದಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ, ಮೊಕದ್ದಮೆ ಸಂಖ್ಯೆ:36/2002.

3. ಪ್ರಾಯೋಗಿಕ ಪಂಚನಾಮೆ ದಿನಾಂಕ:23–10–2002.
4. ಟ್ರ್ಯಾಪ್‌ನ ಮಹಜರ್ ದಿನಾಂಕ:23–10–2002.
5. ರಾಸಾಯನಿಕ ಪರೀಕ್ಷಕರ ವರದಿ ಸಂಖ್ಯೆ:CME/LOK/79/2002–2003, ದಿನಾಂಕ:07–03–2003.
6. ತನಿಖಾಧಿಕಾರಿಯವರು ರಚಿಸಿರುವ ಕೃತ್ಯ ನಡೆದ ಸ್ಥಳದ ನಕಾಶೆ.
7. **ಸಾಕ್ಷಿದಾರರ ಹೇಳಿಕೆಗಳು:–**
    1. ಶ್ರೀ ಶಿವಕುಮಾರ್, ಅಡ್ವೊಕೇಟ್, ನಂ.1098, 1ನೇ ಮಹಡಿ, 3ನೇ ಮುಖ್ಯರಸ್ತೆ,2ನೇ ಹಂತ, ಇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10, (ಫಿರ್ಯಾದುದಾರರು)
    2. ಶ್ರೀ ಉಮೇಶ್‌ಬಾಬು, 27 ವರ್ಷ, ದ್ವಿದಸ, ನಗರ ಯೋಜನಾ ನಿರ್ದೇಶಕರ ಕಛೇರಿ, ಬಹುಮಹಡಿಗಳ ಕಟ್ಟಡ, ಬೆಂಗಳೂರು. (ನೆರಳು ಸಾಕ್ಷಿದಾರರು)
    3. ಶ್ರೀ ಆರ್.ಎಸ್. ರವೀಂದ್ರ, 45 ವರ್ಷ, ದ್ವಿದಸ, ರೇಷ್ಮೆ ನಿರ್ದೇಶಕರ ಕಛೇರಿ, ಬಹುಮಹಡಿಗಳ ಕಟ್ಟಡ, ಬೆಂಗಳೂರು, (ಸಾಕ್ಷಿದಾರರು)
    4. ಶ್ರೀಮತಿ ಆರ್. ಜಯಲಕ್ಷ್ಮಿ, 37 ವರ್ಷ, ನಂ.41, ಪಾಪಯ್ಯ ಗಾರ್ಡನ್, 1ನೇ ಕ್ರಾಸ್, ಕೆ.ಹೆಚ್.ಬಿ. ಕಾಲೋನಿ, ಬೆಂಗಳೂರು. (ಕಕ್ಷಿದಾರರು)
    5. ಶ್ರೀ ಜಿ. ಸ್ವಾಮಿ, 37 ವರ್ಷ, ಟ್ರಾನ್ಸ್‌ಪೋರ್ಟ್ ಬ್ಯುಸಿನೆಸ್, ನಂ.19, ಅನಂತ ನಿಲಯ, 3ನೇ ಕ್ರಾಸ್, ಜಿ.ಬಿ. ಕಾವಲ್, ಗಣೇಶ ಬ್ಲಾಕ್, ಮಹಾಲಕ್ಷ್ಮಿ ಲೇಔಟ್, ಬೆಂಗಳೂರು–96. (ಕಕ್ಷಿದಾರರು)
    6. ಶ್ರೀ ಲಾರೆನ್ಸ್ ಡಾಮ್ನಿಕ್ ಪಿಂಟೋ, 45 ವರ್ಷ, ಬ್ಯುಸಿನೆಸ್, ನಂ.2132, 8ನೇ ಮುಖ್ಯ ರಸ್ತೆ, ರಾಜಾಜಿನಗರ, 2ನೇ ಹಂತ, 'ಡಿ' ಬ್ಲಾಕ್, ಬೆಂಗಳೂರು.
    7. ಶ್ರೀ ಶ್ರೀನಿವಾಸಶೆಟ್ಟಿ, ಹೆಡ್‌ಕಾನ್‌ಸ್ಟೆಬಲ್, ಕರ್ನಾಟಕ ಲೋಕಾಯುಕ್ತ, ಪೋಲೀಸ್ ವಿಂಗ್, ನಗರ ವಿಭಾಗ, ಬೆಂಗಳೂರು.
    8. ಶ್ರೀ ಚಂದ್ರಶೇಖರ್, ಪೋಲೀಸ್ ಕಾನ್‌ಸ್ಟೆಬಲ್, ಕರ್ನಾಟಕ ಲೋಕಾಯುಕ್ತ, ಪೋಲೀಸ್ ವಿಂಗ್, ನಗರ ವಿಭಾಗ, ಬೆಂಗಳೂರು.
    9. ಶ್ರೀ ಹೆಚ್.ಆರ್. ಪುಟ್ಟರುದ್ರಯ್ಯ, ಪೋಲೀಸ್ ಕಾನ್‌ಸ್ಟೆಬಲ್, ಕರ್ನಾಟಕ ಲೋಕಾಯುಕ್ತ, ಪೋಲೀಸ್ ವಿಂಗ್, ನಗರ ವಿಭಾಗ, ಬೆಂಗಳೂರು.
    10. ಶ್ರೀ ವೀರಯ್ಯ, ಸ್ಟುಡಿಯೋ ಇನ್‌ಚಾರ್ಜ್, ನ್ಯಾಷನಲ್ ಕಲರ್ ಲ್ಯಾಬ್, ನಂ.23, ಕ್ರೆಸೆಂಟ್ ರೋಡ್, ಶಿವಾನಂದ ಸ್ಟೋರ್ ಎದುರು, ಬೆಂಗಳೂರು.
8. **ಆರೋಪಿತರುಗಳ ಸಮಜಾಯಿಸಿ ಹೇಳಿಕೆಗಳು:–**
    1. ಶ್ರೀ ಎಂ. ಪುಟ್ಟಸ್ವಾಮಿ, ಹಿರಿಯ ಉಪ ನೋಂದಣಾಧಿಕಾರಿ, ಇವರ ಹೇಳಿಕೆ ದಿನಾಂಕ:23–10–2002.
    2. ಶ್ರೀ ಮುತ್ತರಾಯಪ್ಪ ರವರ ಹೇಳಿಕೆ ದಿನಾಂಕ:23–10–2002.
9. **ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳು:–**

    ಫಿರ್ಯಾದುರಾರರ ಕಕ್ಷಿದಾರರುಗಳಿಗೆ ಸಂಬಂಧಿಸಿದ ನೋಂದಣಿಯಾಗಬೇಕಾಗಿದ್ದ ಪತ್ರಗಳು:–
    1. ಶ್ರೀಮತಿ ಆರ್. ಜಯಲಕ್ಷ್ಮಿ ರವರ ಹೆಸರಿಗೆ, ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಹಂದರದಳ್ಳಿ ಗ್ರಾಮದ ಖಾಲಿ ನಿವೇಶನ ಸಂಖ್ಯೆ:76, ನೋಂದಣಿ ಸಂಖ್ಯೆ:15066/2002–2003.
    2. ಶ್ರೀ ಜಿ. ಸ್ವಾಮಿಯವರ ಹೆಸರಿಗೆ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಹಂದರದಳ್ಳಿ ಗ್ರಾಮದ ಖಾಲಿ ನಿವೇಶನ ಸಂಖ್ಯೆ:75, ನೋಂದಣಿ ಸಂಖ್ಯೆ:15069/2002–2003.

ಮೇಲ್ಕಂಡ ದಾಖಲೆಗಳನ್ನು ಸರ್ಕಾರವು ಪರಿಶೀಲಿಸಲಾಗಿ, ತನಿಖಾಧಿಕಾರಿಗಳಾದ ಶ್ರೀ ಆರ್. ಗಿರಿಜೇಶ್, ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಶ್ರೀ ಎಂ. ಪುಟ್ಟಸ್ವಾಮಿ, ಹಿಂದಿನ ಹಿರಿಯ ಉಪನೋಂದಣಾಧಿಕಾರಿ, ಬೆಂಗಳೂರು ಉತ್ತರ, ಬಸವೇಶ್ವರ ನಗರ ಹಾಗೂ ಹಾಲೀ ಹಿರಿಯ ಉಪನೊಂದಣಾಧಿಕಾರಿ, ನೆಲಮಂಗಲ ಉಪ ನೋಂದಣಿ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ವಿರುದ್ಧ ದಂಡಾರ್ಹ ಟ್ರ್ಯಾಪ್ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು ಇಲ್ಲಿ ಪ್ರಕರಣ ಸಂಖ್ಯೆ: ಕ್ರೈಂ–36/2002, ದಿನಾಂಕ:23–10–02 ರಲ್ಲಿ ಬ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988 ರ ಕಲಂ 7,13(1)(ಡಿ) ಜೊತೆಯಲ್ಲಿ ಓದಲಾದ 13(2) ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಎಂ. ಪುಟ್ಟಸ್ವಾಮಿ, ಹಿರಿಯ ಉಪ ನೋಂದಣಿ ಅಧಿಕಾರಿ, ಇವರು ಫಿರ್ಯಾದುದಾರರಾದ ಶ್ರೀ ಶಿವಕುಮಾರ್, ಅಡ್ವೊಕೇಟ್, ನಂ–1098, 1ನೇ ಮಹಡಿ, 3ನೇ ಮುಖ್ಯರಸ್ತೆ, 2ನೇ ಹಂತ, ಇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10 ಇವರ ಮೂಲಕ ಶ್ರೀ ಲಾರೆನ್ಸ್ ಡಾಮ್ನಿಕ್ ಪಿಂಟೋ ಬಿನ್ ಲೇಟ್ ಲೋವಿಯನ್ ಪಿಂಟೋ, ನಂ. 2132, 8ನೇ ಮುಖ್ಯ ರಸ್ತೆ, ಡಿ ಬ್ಲಾಕ್, 2ನೇ ಹಂತ, ರಾಜಾಜಿನಗರ, ಬೆಂಗಳೂರು ಇವರು ಹೊಂದಿರುವ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಹಂಗರದಳ್ಳಿ ಗ್ರಾಮದ ನಿವೇಶನ ಸಂಖ್ಯೆ: 76 ನ್ನು ಶ್ರೀಮತಿ ಆರ್. ಜಯಲಕ್ಷ್ಮಿ ಕೋಂ ಶ್ರೀ ಚನ್ನಗಂಗಯ್ಯ, ನಂ. 41, 1ನೇ ಮುಖ್ಯರಸ್ತೆ, ಪಾಪಯ್ಯ ಗಾರ್ಡನ್, ಕೆಹೆಚ್‌ಬಿ ಕಾಲೊನಿ, ಬೆಂಗಳೂರು–79 ಇಲ್ಲಿ ವಾಸವಾಗಿರುವ ಇವರು ಮತ್ತು ನಿವೇಶನ ಸಂಖ್ಯೆ; 75 ನ್ನು ಶ್ರೀ ಜಿ. ಸ್ವಾಮಿ ಬಿನ್ ದಿವಂಗತ ಶ್ರೀ ಗಂಗಪ್ಪ, ನಂ.19, ಅನಂತ ನಿಲಯ, 3ನೇ ಕ್ರಾಸ್, ಜಾರಕ್ ಬಂಡೆ ಕಾವಲ್, ಗಣೇಶ ಬ್ಲಾಕ್, ಮಹಾಲಕ್ಷ್ಮಿ ಲೇಔಟ್, ಬೆಂಗಳೂರು–96 ಇಲ್ಲಿ ವಾಸವಾಗಿರುವ ಇವರು ಖರೀದಿಸಿದ್ದು, ಸದರಿ ನಿವೇಶನಗಳನ್ನು ನೋಂದಣಿ ಮಾಡಲು ಪ್ರತಿ ನಿವೇಶನದ ನೋಂದಣಿಗೆ ರೂ. 1,500/– ರಂತೆ ಎರಡು ನಿವೇಶನಗಳ ನೋಂದಣಿಗೆ ಒಟ್ಟು ರೂ. 3,000/– ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ, ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ

ಎಲ್ಲಾ ಔಚಿತ್ಯ ಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ, ದಿನಾಂಕ: 23–10–2002 ರಂದು ಉಪ ನೋಂದಣಾಧಿಕಾರಿಗಳ ಕಛೇರಿ, ಬೆಂಗಳೂರು ಉತ್ತರ, ಬಸವೇಶ್ವರನಗರ, ಬೆಂಗಳೂರು ಇಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿದ್ದು,

ಪಿರ್ಯಾದುದಾರರು ಲಂಚದ ಹಣವನ್ನು ಶ್ರೀ ಎಂ. ಪುಟ್ಟಸ್ವಾಮಿ, ಹಿರಿಯ ಉಪ ನೋಂದಣಾಧಿಕಾರಿ, ಇವರಿಗೆ ನೀಡಲು ಹೋದಾಗ ಶ್ರೀ ಎಂ. ಪುಟ್ಟಸ್ವಾಮಿ ಯವರು ತಮ್ಮ ಮುಂದೆ ನಿಂತಿದ್ದ ಶ್ರೀ ಮುತ್ತುರಾಯಪ್ಪ ರವರನ್ನು ತೋರಿಸಿ ಅವರ ಕೈಗೆ ಹಣವನ್ನು ಕೊಡಿ ಎಂದು ತಿಳಿಸಿದ್ದು, ಅದರಂತೆ ಪಿರ್ಯಾದುದಾರರು ಶ್ರೀ ಮುತ್ತುರಾಯಪ್ಪ ಬಿನ್ ಚಿಕ್ಕಗಂಗಯ್ಯ, ತಿಗಳರ ಪಾಳ್ಯ, ನಾಗಸಂದ್ರ ಅಂಚೆ, ಪೀಣ್ಯ 2ನೇ ಹಂತದ ಪಕ್ಕ, ಬೆಂಗಳೂರು ಉತ್ತರ ತಾಲ್ಲೂಕು, ಇವರಿಗೆ ನೀಡಿರುತ್ತಾರೆ. ಲಂಚದ ಹಣ ರೂ. 3000/– ಗಳನ್ನು ಪಡೆಯುತ್ತಿದ್ದಾಗ ಶ್ರೀ ಮುತ್ತುರಾಯಪ್ಪ ನವರು ಸಿಕ್ಕಿ ಹಾಕಿಕೊಂಡಿರುತ್ತಾರೆ. ಸದರಿ ಆರೋಪಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಹಾಗೂ ಅವರು ಹಣವನ್ನು ಇರಿಸಿಕೊಂಡಿದ್ದ ಪ್ಯಾಂಟಿನ ಎಡಭಾಗದ ಜೇಬನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನ ಮಾಡಿ ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ, ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಾ ವರದಿಯಿಂದಲೂ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 3,000/– ಗಳನ್ನು ಆರೋಪಿ ಶ್ರೀ ಮುತ್ತುರಾಯಪ್ಪ ಇವರಿಂದ ಉಪ ನೋಂದಣಾಧಿಕಾರಿಯವರ ಕಛೇರಿ, ಬೆಂಗಳೂರು ಉತ್ತರ, ಬಸವೇಶ್ವರನಗರ ಇಲ್ಲಿ ಪಂಚರ ಸಮಕ್ಷಮದಲ್ಲಿ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಪಿರ್ಯಾದುದಾರರ ಕಕ್ಷಿದಾರರ ನಿವೇಶನಗಳನ್ನು ನೋಂದಣಿ ಮಾಡಿಕೊಡುವ ಸಂಬಂಧ ಪಿರ್ಯಾದುದಾರರಿಂದ ಲಂಚದ ಹಣ ರೂ. 3000/–ಗಳನ್ನು ಒತ್ತಾಯಿಸಿ ಸ್ವೀಕರಿಸಿರುವ ಆರೋಪಗಳು ತನಿಖೆಯಲ್ಲಿ ಸಂಗ್ರಹಿಸಿರುವ ದಾಖಲೆಗಳಿಂದ ದೃಢಪಟ್ಟಿದ್ದು, ಆಪಾದಿತರು ಲಂಚ ನಿರೋದ ಕಾಯ್ದೆ 1988 ರ ಕಲಂ 7,13(1)(ಡಿ) ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ದೃಢಪಟ್ಟಿರುವುದು ಸರ್ಕಾರದ ಮನವರಿಕೆಗೆ ಬಂದಿರುತ್ತದೆ. ಪ್ರಕರಣದ ಮತ್ತೊಬ್ಬ ಆರೋಪಿ ಶ್ರೀ ಮುತ್ತುರಾಯಪ್ಪನವರು ಖಾಸಗಿ ಆರೋಪಿಯಾಗಿರುತ್ತಾರೆ. ಆದ್ದರಿಂದ, ಶ್ರೀ ಎಂ. ಪುಟ್ಟಸ್ವಾಮಿ, ಹಿರಿಯ ಉಪ ನೋಂದಣಾಧಿಕಾರಿ, ಇವರನ್ನು ಲಂಚ ನಿರೋಧ ಕಾಯ್ದೆ 1988 ರ ಕಲಂ 7,13(1)(ಡಿ) ಮತ್ತು ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕವೆಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು, ಸರ್ಕಾರದ ಆದೇಶ ಸಂಖ್ಯೆ: ಕಂಇ 65 ಮುನೋಸೇ(2) 2003, ದಿನಾಂಕ: 29–3–2005 ರಲ್ಲಿ ಶ್ರೀ ಎಂ. ಪುಟ್ಟಸ್ವಾಮಿ, ಹಿರಿಯ ಉಪನೋಂದಣಾಧಿಕಾರಿ, ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡಿದ್ದು, ಪೊಲೀಸ್ ಮಹಾ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ದಿನಾಂಕ; 12–4–2005 ರ ಮೇಲೆ ಓದಲಾದ–5 ರ ಪತ್ರದಲ್ಲಿ ದೋಷರಹಿತವಾದ ಹಾಗೂ ಸಮಂಜಸವಾದ ಅಭಿಯೋಜನಾ ಮಂಜೂರಾತಿ ಆದೇಶವನ್ನು ಹೊರಡಿಸಲು ಕೋರಿದ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂ.ಇ. 65 ಮುನೋಸೇ (2) 2003, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಕಾರಣಗಳಿಂದಾಗಿ, ಸರ್ಕಾರದ ಆದೇಶ ಸಂಖ್ಯೆ: ಕಂಇ 65 ಮುನೋಸೇ (2) 2003, ದಿನಾಂಕ; 29-3-2005 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ ಹಾಗೂ ಶ್ರೀ ಎಂ. ಪುಟ್ಟಸ್ವಾಮಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಬಸವೇಶ್ವರ ನಗರ, ಬೆಂಗಳೂರು ಉತ್ತರ ತಾಲ್ಲೂಕು, ಮತ್ತು ಹಾಲಿ ಹಿರಿಯ ಉಪ ನೋಂದಣಾಧಿಕಾರಿ, ನೆಲಮಂಗಲ, ಬೆಂಗಳೂರು (ಗ್ರಾಮಾಂತರ) ಜಿಲ್ಲೆ, ಇವರನ್ನು ಲಂಚ ನಿರೋಧ ಕಾಯಿದೆ, 1988ರ ಕಲಂ 7,13(1)(ಡಿ)ಹಾಗೂ 13(2)ರ ಅಡಿಯಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ, ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸದರಿ ಕಾಯ್ದೆಯ ಕಲಂ-19(1)(ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಮಂಜೂರಾತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿಗಳು 1977ರ ಅಡಿಯಲ್ಲಿ ಈ ಮೇಲ್ಕಂಡ ಆದೇಶವನ್ನು ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ 29-08-2005 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 1280

**ವಿಷಯ**: ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ) ರಾಜಾಜಿನಗರ, ಬೆಂಗಳೂರು, ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ**:
1. ಶ್ರೀ ಎಂ. ಗುರುಮಲ್ಲಾರಾಧ್ಯ, ರಾಜಾಜಿನಗರ, ಬೆಂಗಳೂರು ಇವರ ಮನವಿ ದಿನಾಂಕ:28–07–2004.
2. ಸರ್ಕಾರದ ಸಮ ಸಂಖ್ಯೆ ಪತ್ರ ದಿನಾಂಕ:05–08–2004.
3. ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, (ಸಂಘ & ವ್ಯಾಪಾರ ಸಂಸ್ಥೆಗಳು) ಬೆಂಗಳೂರು ರವರ ಪತ್ರ ಸಂಖ್ಯೆ:937/93–94, ದಿನಾಂಕ:07–03–2005.
4. ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರದ ಸಮ ಸಂಖ್ಯೆ: ದಿನಾಂಕ:14–07–2005.
5. ಸಂಸ್ಥೆಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರ ಲಿಖಿತ ಸಮಜಾಯಿಷಿ ದಿನಾಂಕ:28–07–2005 & 29–07–2005.

**ಪ್ರಸ್ತಾವನೆ:**

ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ) ರಾಜಾಜಿನಗರ, ಬೆಂಗಳೂರು, ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರನ್ವಯ ನೋಂದಾಯಿಸಲಾಗಿದ್ದು, ನೋಂದಣಿ ಸಂಖ್ಯೆಯು 937/93–94 ಆಗಿರುತ್ತದೆ. ಸದರಿ

ಸಂಘದ ಬಗ್ಗೆ ಶ್ರೀ ಎಂ. ಗುರುಮಲ್ಲಾರಾಧ್ಯ ರವರು ಮೇಲೆ(1) ರಲ್ಲಿ ಓದಲಾದ ದೂರು ಪತ್ರದಲ್ಲಿ ಏಪ್ರಿಲ್ 2003 ರಿಂದ ಡಿಸೆಂಬರ್ 2003 ರವರೆಗೆ ನಡೆದ ಆಡಿಟ್ ವರದಿಯಲ್ಲಿ ಸಂಘದಲ್ಲಿ ಅವ್ಯವಹಾರ ನಡೆದಿರುವ ಬಗ್ಗೆ ಉಲ್ಲೇಖಿಸುತ್ತಾ ಸಂಘದಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಬಗ್ಗೆ ತನಿಖೆ ನಡೆಸಿ, ತಪ್ಪಿತಸ್ಥರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕೋರಿದ್ದರ ಹಿನ್ನೆಲೆಯಲ್ಲಿ ಮೇಲೆ-2ರಲ್ಲಿ ಓದಲಾದ ಸರ್ಕಾರದ ಸಮ ಸಂಖ್ಯೆ ಪತ್ರ ದಿನಾಂಕ:05-08-2004 ರಲ್ಲಿ ಶ್ರೀ ಎಂ. ಗುರುಮಲ್ಲಾರಾಧ್ಯರವರು ಅವರ ದೂರಿನಲ್ಲಿ ಪ್ರಸ್ತಾಪಿಸಿರುವ ಅಂಶಗಳ ಬಗ್ಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 25 ರ ಪ್ರಕಾರ ತನಿಖೆ ನಡೆಸಿ ವರದಿ ಸಲ್ಲಿಸುವಂತೆ ಜಿಲ್ಲಾ ನೋಂದಣಾಧಿಕಾರಿಗಳು, (ಸಂಘ & ವ್ಯಾಪಾರ ಸಂಸ್ಥೆಗಳು) ಬೆಂಗಳೂರು ನಗರ ಜಿಲ್ಲೆ, ರವರನ್ನು ಕೋರಲಾಗಿತ್ತು. ತತ್ಸಂಬಂಧ ಜಿಲ್ಲಾ ನೋಂದಣಾಧಿಕಾರಿಗಳು, (ಸಂಘ & ವ್ಯಾಪಾರ ಸಂಸ್ಥೆಗಳು) ಬೆಂಗಳೂರು ನಗರ ಜಿಲ್ಲೆ, ರವರು ದಿನಾಂಕ:07-03-2005 ರಂದು ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ಸಂಘದಲ್ಲಿ ನಡೆದಿದೆ ಎನ್ನಲಾದ ಹಣದ ದುರುಪಯೋಗದ ನಿರ್ದಿಷ್ಟ ಮೊತ್ತವನ್ನು ತಿಳಿಯುವ ಕಾರಣಕ್ಕಾಗಿ ಕೈಗೊಂಡ ವಿಚಾರಣಾ ಕ್ರಮಗಳಿಗೆ ಸದರಿ ಸಂಘದ ಅಧ್ಯಕ್ಷರು, ಕಾರ್ಯದರ್ಶಿ, ಉಪಾಧ್ಯಕ್ಷರು ಹಾಗೂ ಪದಾಧಿಕಾರಿಗಳು ಯಾರೊಬ್ಬರೂ ಸಹ ಸದರಿಯವರುಗಳಿಗೆ ನೀಡಲಾದ ನೋಟೀಸುಗಳಿಗೆ ಉತ್ತರಿಸದೆ, ಸಂಬಂಧಿಸಿದ ದಾಖಲೆಗಳನ್ನು ಒದಗಿಸದೆ ಕಾಲಹರಣ ಮಾಡುವ ಉದ್ದೇಶದಿಂದ ವಿಚಾರಣಾ ಪ್ರಕ್ರಿಯೆಯನ್ನು ಉಪೇಕ್ಷಿಸುತ್ತಿರುವುದು ಕಂಡು ಬಂದಿರುವುದರಿಂದ ಮೇಲ್ಕಂಡ ಸದರಿ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆಯ ಕಲಂ 27-ಎ ಪ್ರಕಾರ ಆಡಳಿತಾಧಿಕಾರಿಯನ್ನು ನೇಮಿಸಲು ಮೇಲೆ ಓದಲಾದ-3 ರ ದಿನಾಂಕ:07-03-2005 ರ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ವಿಚಾರಣಾ ವರದಿಗೆ ಸಂಬಂಧಿಸಿದಂತೆ ಸಂಘದ ಕಾರ್ಯದರ್ಶಿಯವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ: 07-03-2005 ರ ಮನವಿಯಲ್ಲಿ ವಿಚಾರಣಾಧಿಕಾರಿಗಳು ಕೋರಿದ್ದ ದಾಖಲಾತಿಗಳು ಹಾಗೂ ಆಡಿಟ್ ಮಾಡಿಸಲಾದ ಲೆಕ್ಕಪತ್ರಗಳನ್ನು ದಿನಾಂಕ:19-01-2005 ರಂದು ವಿಚಾರಣಾಧಿಕಾರಿಯವರಿಗೆ ಸಲ್ಲಿಸಲು ಹೋದಾಗ ಸದರಿಯವರು ಸ್ವೀಕರಿಸದೆ ಜಿಲ್ಲಾ ನೋಂದಣಾಧಿಕಾರಿಯವರಿಗೆ ಸಲ್ಲಿಸುವಂತೆ ತಿಳಿಸಿದರು. ಅದರಂತೆ ದಿನಾಂಕ:22/23-02-2005 ರಂದು ಜಿಲ್ಲಾ ನೋಂದಣಾಧಿಕಾರಿಗಳಿಗೆ ಸಲ್ಲಿಸಲು ಹೋದಾಗ ಸದರಿಯವರೂ ಸಹ ಸ್ವೀಕರಿಸಲು ನಿರಾಕರಿಸಿದರೆಂದು ತಿಳಿಸಿ, ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಕ್ರಮವನ್ನು ಕೈಬಿಡುವಂತೆ ಕೋರಿದ್ದರ ಮೇರೆಗೆ ಈ ಕುರಿತು ದಿನಾಂಕ:11-04-2005 ರ ಸರ್ಕಾರದ ಸಮ ಸಂಖ್ಯೆ ಪತ್ರದಲ್ಲಿ ಪುನ: ಜಿಲ್ಲಾ ನೋಂದಣಾಧಿಕಾರಿಗಳ ಅಭಿಪ್ರಾಯ ಕೋರಲಾಗಿತ್ತು. ಅದರನ್ವಯ ಜಿಲ್ಲಾ ನೊಂದಣಾಧಿಕಾರಿಯವರು ಮೇಲ್ಕಂಡ ಸಂಸ್ಥೆಯ ಕಾರ್ಯದರ್ಶಿಯವರಿಗೆ ದಿನಾಂಕ:19-05-2005 ರಂದು ವಿವರಣೆ ಕೇಳಿ ಪುನ: ನೋಟೀಸು ಕಳುಹಿಸಿದ್ದರೂ, ಆ ಬಗ್ಗೆ ಕಾರ್ಯದರ್ಶಿಯವರು ಯಾವುದೇ ವಿವರಣೆಯನ್ನು ಸಲ್ಲಿಸಿರುವುದಿಲ್ಲ. ಅಲ್ಲದೆ ಸಂಘದಲ್ಲಿ ಎರಡು ಗುಂಪುಗಳಾಗಿದ್ದು ಒಬ್ಬರನ್ನೊಬ್ಬರು ಸಂಘದ ಕಾರ್ಯಕಾರಿ ಸಮಿತಿಯಿಂದ ತೆಗೆಯುವುದು, ಹೊಸದಾಗಿ ನೇಮಿಸಿಕೊಳ್ಳುವುದು, ಹೀಗೆ ಸಂಘದ ಸದಸ್ಯರಲ್ಲಿನ ಗುಂಪುಗಳಲ್ಲಿನ ವಿವಾದವು ಹಾಗೂ ಹಣದ ಅವ್ಯವಹಾರವು ಅವ್ಯಾಹತವಾಗಿ ನಡೆಯುತ್ತಿದ್ದು, ಇದು ಇದೇ ರೀತಿ ಮುಂದುವರಿದಲ್ಲಿ, ಸಂಘದ ಮೂಲ ಉದ್ದೇಶಕ್ಕೆ ಭಂಗ ಉಂಟಾಗುತ್ತದೆ. ಆದ್ದರಿಂದ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಆಡಳಿತಾಧಿಕಾರಿಯನ್ನು ನೇಮಕ ಮಾಡುವಂತೆ ಮೇಲೆ ಓದಲಾದ-3 ರ ದಿನಾಂಕ: 15-06-2005 ಮತ್ತು 04-07-2005 ರ ಪತ್ರಗಳಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ರವರ ಮೇಲೆ ಓದಲಾದ-3 ರ ಪ್ರಸ್ತಾವನೆಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು, ಸಂಘದಲ್ಲಿ ಹಣದ ಅವ್ಯವಹಾರ ನಡೆಯುತ್ತಿರುವುದು ಮತ್ತು ಸಂಘದ ಸದಸ್ಯರುಗಳಲ್ಲಿ ಎರಡು ಗುಂಪುಗಳಿದ್ದು, ಸದರಿ ಗುಂಪುಗಳ ನಡುವಿನ ವಿವಾದವು ಅವ್ಯಾಹತವಾಗಿ ಮುಂದುವರೆದಿದ್ದು, ಸಂಘದ ಹಿತಕ್ಕೆ ಧಕ್ಕೆ ಉಂಟಾಗುತ್ತಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ, ಕಾಯ್ದೆಯ ಕಲಂ 27-ಎ ಪ್ರಕಾರ ಸಂಘಕ್ಕೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬುದರ ಬಗ್ಗೆ ನೋಟೀಸು ತಲುಪಿದ 15 ದಿನದೊಳಗಾಗಿ ಲಿಖಿತ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಮೇಲೆ ಓದಲಾದ-3 ರಲ್ಲಿ ಕಾರಣ ಕೇಳುವ ಸೂಚನಾ ಪತ್ರವನ್ನು ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳಿಗೆ ಜಾರಿ ಮಾಡಲಾಗಿತ್ತು.

ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು ಮೇಲೆ (5) ರಲ್ಲಿ ಓದಲಾದ ಪತ್ರಗಳಲ್ಲಿ ಪ್ರತ್ಯೇಕವಾದ ಲಿಖಿತ ಹೇಳಿಕೆಗಳನ್ನು ಸಲ್ಲಿಸಿರುತ್ತಾರೆ. ಸದರಿಯವರ ಹೇಳಿಕೆಗಳನ್ನು ಪರಿಶೀಲಿಸಲಾಗಿ ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರ ನಡುವೆ ಭಿನ್ನಾಭಿಪ್ರಾಯಗಳಿದ್ದು, ಇಬ್ಬರೂ ಪ್ರತ್ಯೇಕ ಕಾರ್ಯಕಾರಿ ಮಂಡಳಿಯನ್ನು ನಿಯಮಬಾಹಿರವಾಗಿ ರಚಿಸಿಕೊಂಡಿರುವುದು, ಒಬ್ಬರ ಮೇಲೊಬ್ಬರು ಆರೋಪ, ಪ್ರತ್ಯಾರೋಪ ಮಾಡಿರುವುದು, ಸಂಘದ ಕಾರ್ಯಕಲಾಪಗಳಲ್ಲಿ ಗಲಾಟೆ, ಗದ್ದಲ ಇತ್ಯಾದಿ, ನಡೆದಿರುವುದು ಕಂಡು ಬರುತ್ತದೆ, ಅಲ್ಲದೆ ಸಂಘದಲ್ಲಿನ ಹಣದ ದುರ್ಬಳಕೆ ಮಾಡಿರುವುದರ ಬಗ್ಗೆ ಸದರಿಯವರುಗಳೇ ಆರೋಪ ಪ್ರತ್ಯಾರೋಪಗಳ ಮೂಲಕ ಋಜುವಾತು ಮಾಡಿರುತ್ತಾರೆ. ಸಂಘದ ಅಧ್ಯಕ್ಷರು ಸಂಘದಲ್ಲಿ ಹಣದ ದುರ್ಬಳಕೆಯಾಗಿರುವುದರಿಂದ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವಂತೆ ಲಿಖಿತ ಹೇಳಿಕೆಯಲ್ಲಿ ತಿಳಿಸಿರುತ್ತಾರೆ. ಸಂಘದ ಕಾರ್ಯದರ್ಶಿಯವರೂ ಸಹ ಹಣದ ದುರುಪಯೋಗದ ಬಗ್ಗೆ ತನಿಖಾಧಿಕಾರಿಗಳಿಂದ ತನಿಖೆ ಮಾಡಿಸಿ ತಪ್ಪಿತಸ್ಥರ ವಿರುದ್ಧ ಶಿಸ್ತು ಕ್ರಮ ತೆಗೆದುಕೊಳ್ಳುವಂತೆ ಕೋರಿರುತ್ತಾರೆ.

ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರ ಲಿಖಿತ ಹೇಳಿಕೆಯನ್ನು ಪರಿಶೀಲಿಸಲಾಗಿದ್ದು ಸಂಘದಲ್ಲಿ ಎರಡು ಗುಂಪುಗಳಿದ್ದು, ಸದರಿ ಗುಂಪುಗಳು ನಿಯಮ ಬಾಹಿರ ಚಟುವಟಿಕೆಗಳಲ್ಲಿ ತೊಡಗಿ, ಸಂಘದ ಹಣ, ಆಸ್ತಿಯನ್ನು ದುರುಪಯೋಗ ಪಡಿಸಿಕೊಂಡು ಸಂಘದ ಮೂಲ ಉದ್ದೇಶಕ್ಕೆ ಧಕ್ಕೆಯುಂಟುಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಈ ಸಂಸ್ಥೆಯನ್ನು ಸರಿದಾರಿಗೆ ತರುವ ದೃಷ್ಟಿಯಿಂದ ಸದರಿ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27-ಎ ಪ್ರಕಾರ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 41 ಮುನೊಸೊ 2004, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಂಘದ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ) ರಾಜಾಜಿನಗರ, ಬೆಂಗಳೂರು, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27–ಎ (1)(ಸಿ) ರಲ್ಲಿ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ, ತಹಶೀಲ್ದಾರ್. ಬೆಂಗಳೂರು ಉತ್ತರ ತಾಲ್ಲೂಕು ಇವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಘಕ್ಕೆ ನಿಯಮಾನುಸಾರ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಕೂಡಲೇ ಸಂಘದ ಕಾರ್ಯಭಾರವನ್ನು ವಹಿಸಿಕೊಂಡು ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ನಿಗಧಿತ ಅವಧಿಯೊಳಗೆ ಸಂಘಕ್ಕೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಪಿ. ಮಂಜುನಾಥ್**
ಪೀಠಾಧಿಕಾರಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 1271

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಮೈಸೂರು ವೈದ್ಯಕೀಯ ಕಾಲೇಜಿನ ಶಿಶುಶಸ್ತ್ರಚಿಕಿತ್ಸಾಶಾಸ್ತ್ರ, ಉಪನ್ಯಾಸಕರಾದ ಡಾ: ಎನ್. ಮುನಿನರಸಯ್ಯ ರವರ ವಿರುದ್ಧ ಶಿಸ್ತಿನ ಕ್ರಮ.

**ಓದಲಾಗಿದೆ:**
1.) ದಿನಾಂಕ: 30.05.1985, ಸಂಖ್ಯೆ: ವಾಸ್ರೇಅ (3) 17 / 80 - 81 ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
2) ದಿನಾಂಕ: 23.12.1980, ಸಂಖ್ಯೆ: ಹೆಚ್‌ಎಫ್‌ಡಬ್ಲ್ಯು 132 ಎಂಸಿಎಲ್ 1980 ರ ನೋಟೀಸು.
3) ದಿನಾಂಕ: 16.06.1981 ರ ಡೆಕ್ಕನ್ ಹೆರಾಲ್ಡ್ ಪತ್ರಿಕೆಯಲ್ಲಿ ಪ್ರಕಟಿಸಿದ ತಾ: 23.12.1980 ರ ಸೂಚನೆ ಮತ್ತು ಅದರ 4 ಅನುಬಂಧಗಳು.
4) ದಿನಾಂಕ: 17/06/1981 ರ ಕನ್ನಡ ಪ್ರಭದಲ್ಲಿ ಪ್ರಕಟಿಸಿದ ತಾ: 23.12.1980 ರ ಸೂಚನೆ ಮತ್ತು ಅದರ ನಾಲ್ಕು ಅನುಬಂಧಗಳು.
5) ತಾ: 15.11.1988, ಸಂಖ್ಯೆ: ಆಕುಕ 35 ಎಂಸಿಎಲ್ 82 ರ ಸರ್ಕಾರಿ ಆದೇಶ.
6) ತಾ: 6.4.1989 ಕನ್ನಡ ಪ್ರಭದಲ್ಲಿ ಪ್ರಕಟಿಸಿದ ವಿಚಾರಣಾ ನೋಟೀಸು.
7) ತಾ: 27.4.1991 ರ ವೈದ್ಯಕೀಯ ಶಿಕ್ಷಣ ಜಂಟಿ ನಿರ್ದೇಶಕರ ಮತ್ತು ವಿಚಾರಣಾ ಪ್ರಾಧಿಕಾರ ರವರ ಪತ್ರ.
8) ತಾ: 19.10.1991, ಸಂಖ್ಯೆ: ಪಿಎಸ್‌ಸಿ 107 ಸಿಎನ್‌ಎಸ್ 91-92 ರ ಕರ್ನಾಟಕ ಲೋಕ ಸೇವಾ ಆಯೋಗದ ಕಾರ್ಯದರ್ಶಿಯವರ ಪತ್ರ.
9) ತಾ: 26.6.1993, ಸಂಖ್ಯೆ: ಆಕುಕ 35 ಎಂಸಿಎಲ್ 82 ರ ಸರ್ಕಾರಿ ಆದೇಶ.
10) ತಾ: 19.7.1993, ಸಂಖ್ಯೆ: ಆಕುಕ 35 ಎಂಸಿಎಲ್ 82 ರ ಕಾರಣ ಕೇಳುವ ನೋಟೀಸು.
11) ತಾ: 9.12.1999, ಸಂಖ್ಯೆ: ಆಕುಕ 35 ಎಂಸಿಎಲ್ 82 ರ ಸರ್ಕಾರಿ ಆದೇಶ.
12) ತಾ: 31.3.2000 ದ ಸಂಯುಕ್ತ ಕರ್ನಾಟಕ ಮತ್ತು ಕನ್ನಡ ಪ್ರಭದಲ್ಲಿ ಪ್ರಕಟಿಸಿದ ಅನಧಿಕೃತ ಗೈರು ಹಾಜರಿಯ ಅಧಿಸೂಚನೆ ಮತ್ತು ವಿಚಾರಣೆಗೆ ಹಾಜರಾಗಲು ಸೂಚನೆ.
13) ತಾ: 11.5.2001 ರ ನಿವೃತ್ತ ಜಿಲ್ಲಾ ನ್ಯಾಯಾಧೀಶ ಮತ್ತು ವಿಚಾರಣಾಧಿಕಾರಿ ಶ್ರೀ. ಎಸ್.ವಿ. ತಿಳಗುಲ್ ರವರ ವಿಚಾರಣಾ ವರದಿ.
14) ತಾ: 20.5.1995 ರ ಪ್ರಜಾವಾಣಿ ಮತ್ತು ಸಂಯುಕ್ತ ಕರ್ನಾಟಕ ಪತ್ರಿಕೆಗಳಲ್ಲಿ ಪ್ರಕಟಿಸಿದ ಅನಧಿಕೃತ ಗೈರು ಹಾಜರಿಯ ಪ್ರಕಟಣೆ.
15) ತಾ: 31.8.2001, ಸಂಖ್ಯೆ: ಪಿಎಸ್‌ಸಿ 37 ಸಿಎನ್‌ಎಸ್ 2001 ರ ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ.
16) ತಾ: 8.3.2002, ಸಂಖ್ಯೆ: ಆಕುಕ 35 ಎಂಸಿಎಲ್ 82 ರ 2 ನೇ ಕಾರಣ ಕೇಳುವ ನೋಟೀಸು.
17) ತಾ: 17.4.2004 ರ ಪ್ರಜಾವಾಣಿ ಮತ್ತು ವಿಜಯ ಕರ್ನಾಟಕದಲ್ಲಿ ಪ್ರಕಟಿಸಿದ ತಾ: 15.3.2004, ಸಂಖ್ಯೆ: ಆಕುಕ 7 ಎಂಸಿಎಲ್ 2004 ರ ಅಧಿಸೂಚನೆ.

**ಪೀಠಿಕೆ :**

೧. ಮೈಸೂರು ವೈದ್ಯಕೀಯ ಕಾಲೇಜಿನ ಶಿಶುಶಸ್ತ್ರಚಿಕಿತ್ಸಾಶಾಸ್ತ್ರ, ಉಪನ್ಯಾಸಕರಾದ ಡಾ: ಎನ್. ಮುನಿನರಸಯ್ಯ ರವರು ದಿನಾಂಕ: 16.2.1980 ಅನಧಿಕೃತ ಗೈರು ಹಾಜರಾಗಿದ್ದರು. ದಿನಾಂಕ: 15.1.1981 ರಂದು ಅವರಿಗೆ ನೀಡಲಾಗಿದ್ದ Recall Memo "Party Left" ಎಂಬ ಹಿಂಬರಹದೊಂದಿಗೆ ಹಿಂತಿರುಗಿತ್ತು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ (ಕೆಸಿಎಸ್‌ಆರ್‌ಎಸ್) 108 ನೇ ನಿಯಮದಡಿ ಯಾವುದೇ ಸರ್ಕಾರಿ ನೌಕರರು 4 ತಿಂಗಳ ಅವಧಿಗೆ ಮೀರಿ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾದಲ್ಲಿ ಅವರನ್ನು ಸೇವೆಯಿಂದ ತೆಗೆದು ಹಾಕುವ ಅಥವಾ ವಜಾ ಮಾಡುವ ದಂಡನೆಯನ್ನು 1957 ರ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿಯಲ್ಲಿ ನಿಗದಿಪಡಿಸಿರುವ ಪ್ರಕ್ರಿಯೆಯನ್ನು ಪಾಲಿಸಿ ವಿಧಿಸಬಹುದಾಗಿರುತ್ತದೆ. ಆದರಂತೆ, ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡುವ ಹಿನ್ನೆಲೆಯಲ್ಲಿ ದಿನಾಂಕ: 23.12.1980 ರ ಸೂಚನೆಯನ್ನು 1957 ರ ಕೆಸಿಎಸ್ (ಸಿಸಿಎ) ನಿಯಮಾವಳಿಯ 11 ನೇ ನಿಯಮದಡಿ ನೀಡಲಾಗಿತ್ತು, 15 ದಿನಗಳಲ್ಲಿ ಅವರ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ನಿರ್ದೇಶಿಸಲಾಗಿತ್ತು, ಆದರೆ ಅವರು ಅದಕ್ಕೆ ಸ್ಪಂದಿಸಿರಲಿಲ್ಲ. ಮೇಲ್ಕಂಡ ನೋಟೀಸು

ಅವರಿಗೆ ಜಾರಿಯಾಗದ ಕಾರಣ ಅದನ್ನು ಅನುಬಂಧಗಳೊಂದಿಗೆ ದಿನಾಂಕ: 17.6.1981 ರ ಕನ್ನಡ ಪ್ರಭದಲ್ಲಿ ಪ್ರಕಟಿಸಲಾಗಿತ್ತು. ಅದಕ್ಕೂ ಅವರು ಪ್ರತಿಕ್ರಿಯಿಸಿರಲಿಲ್ಲ. ಆದಕಾರಣ ಅವರ ವಿರುದ್ಧ ಔಪಚಾರಿಕ ಇಲಾಖಾ ವಿಚಾರಣೆಯನ್ನು ನಡೆಸಲು ತಾ: 15.11.1988 ರ ಸರ್ಕಾರಿ ಆದೇಶದಲ್ಲಿ ವೈದ್ಯಕೀಯ ಶಿಕ್ಷಣ ಜಂಟಿ ನಿರ್ದೇಶಕರನ್ನು ವಿಚಾರಣಾ ಪ್ರಾಧಿಕಾರವಾಗಿ ಸದರಿ ನಿಯಮಾವಳಿಯ 11 (2) ನೇ ನಿಯಮದಡಿ ನೇಮಿಸಲಾಗಿತ್ತು. ವಿಚಾರಣಾ ನೋಟೀಸನ್ನು ವಿಚಾರಣಾ ಪ್ರಾಧಿಕಾರವು ತಾ: 6.4.1989 ರ ಕನ್ನಡ ಪ್ರಭದಲ್ಲಿ ಪ್ರಕಟಿಸಿ ತಾ: 28.4.1989 ರ ವಿಚಾರಣೆಗೆ ಹಾಜರಾಗಲು ಸೂಚಿಸಿದ್ದರು. ಆಪಾದಿತರು ಅದಕ್ಕೆ ಪ್ರತಿಕ್ರಿಯಿಸಿರಲಿಲ್ಲ. ಆದಕಾರಣ ಏಕಪಕ್ಷೀಯವಾಗಿ ವಿಚಾರಣೆಯನ್ನು ನಡೆಸಿ ತಾ: 27.4.1991 ರಂದು ವಿಚಾರಣಾ ಪ್ರಾಧಿಕಾರವು ವರದಿಯನ್ನು ಸಲ್ಲಿಸಿದ್ದರು. ಅದನ್ನು ವಿಮರ್ಶಿಸಿ ಅವರ ಮೇಲೆ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ಮತ್ತು ಅವರನ್ನು ಅದರಂತೆ ವಜಾ ಮಾಡಲು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಪಡೆಯಲಾಗಿತ್ತು. ಆದರೆ ಅಂತಿಮ ಆದೇಶವನ್ನು ಹೊರಡಿಸುವ ಪೂರ್ವದಲ್ಲಿ ಏತನ್ಮಧ್ಯೆ ಕೆಲವು ತಾಂತ್ರಿಕ ದೋಷಗಳ ಹಿನ್ನೆಲೆಯಲ್ಲಿ ತಾ: 26.6.1993 ರ ಸರ್ಕಾರಿ ಆದೇಶದಲ್ಲಿ ಅವರಿಗೆ ನೀಡಲಾಗಿದ್ದ ನೋಟೀಸನ್ನು ಹಿಂತೆಗೆದುಕೊಂಡು ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಹಕ್ಕನ್ನು ಕಾಯ್ದಿರಿಸಿಕೊಳ್ಳಲಾಗಿತ್ತು. ಅದರಂತೆ, ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ತಾ: 19.7.1993 ರ ಸೂಚನೆಯನ್ನು ನೀಡಲಾಗಿತ್ತು. ಆಪಾದಿತರಿಗೆ ಅದನ್ನು ಜಾರಿ ಮಾಡಲು ಸಾಧ್ಯವಾಗಿರಲಿಲ್ಲ. ಆದ್ದರಿಂದ ಮೇಲ್ಕಂಡ ನಿಯಮಾವಳಿಯ 28-A ನಿಯಮದಡಿ ತಾ: 20.5.1995 ರ ಪ್ರಜಾವಾಣಿ ಮತ್ತು ಸಂಯುಕ್ತ ಕರ್ನಾಟಕಗಳಲ್ಲಿ ಪ್ರಕಟಿಸಿದ ಅಧಿಸೂಚನೆಯಲ್ಲಿ ಅವರ ವಿರುದ್ಧದ ದೋಷಾರೋಪಣೆಯನ್ನು ನಮೂದಿಸಿ 15 ದಿನಗಳ ಅವಧಿಯಲ್ಲಿ ಕರ್ತವ್ಯಕ್ಕೆ ಹಾಜರಾಗುವಂತೆ ನಿರ್ದೇಶಿಸಲಾಗಿತ್ತು. ತಪ್ಪಿದ್ದಲ್ಲಿ ಕೆಸಿಎಸ್‌ಆರ್‌ಎಸ್‌ನ 108 ನೇ ನಿಯಮದಡಿ ಅವರ ವಿರುದ್ಧ ಕ್ರಮ ಜರುಗಿಸಲಾಗುವುದು ಎಂಬ ಎಚ್ಚರಿಕೆಯನ್ನು ನೀಡಲಾಗಿತ್ತು. ಅವರು ಯಾವುದಕ್ಕೂ ಪ್ರತಿಕ್ರಿಯಿಸದ ಕಾರಣ ದಿನಾಂಕ: 9.12.1999 ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ನಿವೃತ್ತ ಜಿಲ್ಲಾ ನ್ಯಾಯಾಧೀಶ ಶ್ರೀ. ಎಸ್.ವಿ. ತಿಳಗುಲ್ ರವರನ್ನು ವಿಚಾರಣಾ ಪ್ರಾಧಿಕಾರವಾಗಿ ಮತ್ತು ವೈದ್ಯಕೀಯ ಶಿಕ್ಷಣ ಉಪನಿರ್ದೇಶಕರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು. ಮತ್ತೊಂದು ಅವಕಾಶ ನೀಡುವ ಸಲುವಾಗಿ ದಿನಾಂಕ: 31.3.2000 ರ "ಸಂಯುಕ್ತ ಕರ್ನಾಟಕ ಮತ್ತು ಕನ್ನಡ ಪ್ರಭ" ದಲ್ಲಿ ಒಂದು ಪ್ರಕಟಣೆಯನ್ನು ನೀಡಿ ತಾ: 2.5.2000 ರಂದು ವಿಚಾರಣೆಗೆ ಹಾಜರಾಗುವಂತೆ ತಪ್ಪಿದ್ದಲ್ಲಿ ಏಕಪಕ್ಷೀಯವಾಗಿ ನಿರ್ಧಾರವನ್ನು ತೆಗೆದುಕೊಳ್ಳಲಾಗುವುದೆಂದು ಸೂಚಿಸಲಾಗಿತ್ತು.

೨. ದಿನಾಂಕ: 11.5.2001 ರ ವಿಚಾರಣಾ ವರದಿಯಲ್ಲಿ ಆಪಾದಿತರ ವಿರುದ್ಧ ಮಾಡಲಾಗಿದ್ದ ಆರೋಪಣೆ ಸಾಬೀತಾಗಿದೆ ಎಂಬ findings ನೊಂದಿಗೆ ವಿಚಾರಣಾ ವರದಿಯನ್ನು ನೀಡಿದ್ದರು. ಅವರಿಗೆ 2 ನೇ ಕಾರಣ ಕೇಳುವ ಸೂಚನೆಯನ್ನು ಜಾರಿ ಮಾಡಿರಲಿಲ್ಲ.

೩. ಕೆ.ಸಿ.ಎಸ್.ಆರ್.ಎಸ್. ನ 108 ನೇ ನಿಯಮದೊಂದಿಗೆ ಓದಲಾದ ತಾ: 14.9.2001 ಸಂಖ್ಯೆ: ಸಿಆಸುಇ 18 ಸೇಇವಿ 2001ರ ಸುತ್ತೋಲೆಯನ್ನು ಉದ್ದರಿಸಿ 1957 ರ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಯ 8 (viii) ನೇ ನಿಯಮದಡಿ ಆಪಾದಿತರ ಮೇಲೆ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ನಿರ್ಧರಿಸಲಾಯಿತು. ಅದರಂತೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಪಡೆಯಲಾಯಿತು.

೪. ಆಪಾದಿತರಿಗೆ ಮತ್ತೊಂದು ಅವಕಾಶವನ್ನು ನೀಡುವುದು ಸಮುಚಿತವೆಂದು ಪರಿಗಣಿಸಿದ ಸರ್ಕಾರವು ತಾ: 15.3.2004 ಸಂಖ್ಯೆ: ಆಕುಕ 7 ಎಂಸಿಎಲ್ 2004 ರ ಅಧಿಸೂಚನೆಯನ್ನು ತಾ: 17.4.2004 ರ ಪ್ರಜಾವಾಣಿ ಮತ್ತು ವಿಜಯ ಕರ್ನಾಟಕದಲ್ಲಿ ಪ್ರಕಟಿಸಿ 15 ದಿನಗಳ ಅವಧಿಯಲ್ಲಿ ಸರ್ಕಾರವನ್ನು ಸಂಪರ್ಕಿಸಿ 2 ನೇ ಕಾರಣ ಕೇಳುವ ಶೋಕಾಸ್ ನೋಟೀಸನ್ನು ಪಡೆದು ಉತ್ತರಗಳನ್ನು ಸಲ್ಲಿಸಲು ಸೂಚಿಸಿ ಈ ಸದಾವಕಾಶವನ್ನು ಉಪಯೋಗಿಸಿಕೊಳ್ಳದಿದ್ದಲ್ಲಿ ಅದರಂತೆ ಪರಿಭಾವಿಸಿ ಆಪಾದಿತರ ವಿರುದ್ಧ ಸಾಬೀತಾಗಿರುವ ದೋಷಾರೋಪಣೆಯ ಸ್ವರೂಪ ಮತ್ತು ತೀವ್ರತೆಗೆ ತಕ್ಕಂತಹ ದಂಡನೆಯನ್ನು ವಿಧಿಸಲಾಗುವುದು ಎಂದು ಸುಸ್ಪಷ್ಟವಾಗಿ ನಮೂದಿಸಲಾಗಿತ್ತು. ಆಪಾದಿತರು ಅದಕ್ಕೆ ಪ್ರತಿಕ್ರಿಯಿಸಿಲ್ಲ. ಆದ್ದರಿಂದ ಮೇಲ್ಕಂಡ ಸರ್ಕಾರದ ತಾತ್ವಿಕ ನಿರ್ಧಾರದಂತೆ ಅವರನ್ನು ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 20 ಎಂಸಿಎಲ್ 2004, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2005**

೫. ಮೈಸೂರು ವೈದ್ಯಕೀಯ ಕಾಲೇಜಿನ ಶಿಶುಶಸ್ತ್ರಚಿಕಿತ್ಸಾಶಾಸ್ತ್ರ, ಉಪನ್ಯಾಸಕರಾಗಿದ್ದು ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿರುವ ಡಾ: ಎನ್. ಮುನಿನರಸಯ್ಯ ರವರ ಮೇಲೆ 1957 ರ ಕೆಸಿಎಸ್ (ಸಿಸಿಎ) ನಿಯಮಾವಳಿಯ 8 (viii) ನೇ ನಿಯಮದಡಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ ಮತ್ತು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಲಾಗಿದೆ.

೬. ಮೈಸೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರು ವಿದ್ಯುಕ್ತವಾದ ಆದೇಶವನ್ನು ಹೊರಡಿಸಿ ಡಾ: ಎನ್. ಮುನಿನರಸಯ್ಯ ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ತವ್ಯದಿಂದ ವಿಮುಕ್ತಗೊಳಿಸಿ ಅದರ ಪ್ರತಿಯನ್ನು ತ್ವರಿತವಾಗಿ ಸರ್ಕಾರಕ್ಕೆ, ಮಹಾಲೇಖಪಾಲರಿಗೆ (ಎ ಅಂಡ್ ಇ) ಮತ್ತು ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್. 1301

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

**ವಿಷಯ:** ಬೆಂಗಳೂರು ವೈದ್ಯಕೀಯ ಕಾಲೇಜಿನ ಅನಾಟಮಿ ಉಪನ್ಯಾಸಕರಾದ ಡಾ: ಕೃಷ್ಣಮೂರ್ತಿ ಇವರ ವಿರುದ್ಧ ಶಿಸ್ತಿನ ಕ್ರಮ.

**ಓದಲಾಗಿದೆ:**
1) ದಿನಾಂಕ: 30.09.1989, ಸಂಖ್ಯೆ: ವಾಸ್ರೇಅ (2) 13 / 89 - 90 ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
2) ದಿನಾಂಕ: 29.6.1989, ಸಂಖ್ಯೆ: ಆಕುಕ 111 ಎಂಸಿಎಲ್ 85 ರ ಸರ್ಕಾರಿ ಆದೇಶ.
3) ತಾ: 7.1.97, ಸಂಖ್ಯೆ: ಆಕುಕ 208 ಎಂಪಿಎಸ್ 89 ರ ಕಾರಣ ಕೇಳುವ ನೋಟೀಸು.
4) ತಾ: 5.1.1993, ಸಂಖ್ಯೆ: ಆಕುಕ 208 ಎಂಪಿಎಸ್ 89 ರ ಅಧಿಸೂಚನೆ.
5) ದಿನಾಂಕ: 4.11.94 ರ ಕನ್ನಡ ಪ್ರಭ ಮತ್ತು ತಾ: 13.11.1994 ರ ಡೆಕ್ಕನ್ ಹೆರಾಲ್ಡ್ ಪತ್ರಿಕೆಯಲ್ಲಿ ಪ್ರಕಟಿಸಿದ ತಾ: 29.10.1994 ರ ಸೂಚನೆ.
6) ತಾ: 18.2.1995, ಸಂಖ್ಯೆ: ಪಿಎಸ್‌ಸಿ 158 ಸಿಎನ್‌ಎಸ್ 94 ರ ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ.
7) ತಾ: 9.3.2000, ಸಂಖ್ಯೆ: ಆಕುಕ 208 ಎಂಪಿಎಸ್ 89 ರ ಸರ್ಕಾರಿ ಆದೇಶ.

8) ತಾ: 5.9.2002 ರ ನಿವೃತ್ತ ಜಿಲ್ಲಾ ನ್ಯಾಯಾಧೀಶ ಮತ್ತು ವಿಚಾರಣಾಧಿಕಾರಿ ಶ್ರೀ. ಎಸ್.ವಿ. ತಿಳಗುಲ್ ರವರ ವಿಚಾರಣಾ ವರದಿ.
9) ತಾ: 18.02.2003, ಸಂಖ್ಯೆ: ಆಕುಕ 204 ಎಂಪಿಎಸ್ 89 ರ 2 ನೇ ಕಾರಣ ಕೇಳುವ ನೋಟೀಸು.
10) ತಾ: 15.3.2004, ಸಂಖ್ಯೆ: ಆಕುಕ 7 ಎಂಸಿಎಲ್ 2004 ರ ಅಧಿಸೂಚನೆ.
11) ತಾ: 17.4.2004ರ ವಿಜಯ ಕರ್ನಾಟಕ ಮತ್ತು ಪ್ರಜಾವಾಣಿಯಲ್ಲಿ ಪ್ರಕಟಿಸಿದ ತಾ: 15.3.2004 ರ ಅಧಿಸೂಚನೆ.

**ಪೀಠಿಕೆ :**

೧. ಬೆಂಗಳೂರು ವೈದ್ಯಕೀಯ ಕಾಲೇಜಿನ ಅನಾಟಮಿ ಉಪನ್ಯಾಸಕರಾದ ಡಾ: ಕೃಷ್ಣಮೂರ್ತಿ ರವರು ದಿನಾಂಕ: 2.11.1989 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದರು. ದಿನಾಂಕ: 30.1.1990 ರಂದು ಅವರಿಗೆ ನೀಡಲಾಗಿದ್ದ Recall Memo "Party Left" ಎಂಬ ಹಿಂಬರಹದೊಂದಿಗೆ ಹಿಂತಿರುಗಿತ್ತು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ (ಕೆಸಿಎಸ್ಆರ್ಎಸ್) 108 ನೇ ನಿಯಮದಡಿ ಯಾವುದೇ ಸರ್ಕಾರಿ ನೌಕರರು 4 ತಿಂಗಳಿಗೆ ಅವಧಿಗೆ ಮೀರಿ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾದಲ್ಲಿ ಅವರನ್ನು ಸೇವೆಯಿಂದ ತೆಗೆದು ಹಾಕುವ ಅಥವಾ ವಜಾ ಮಾಡುವ ದಂಡನೆಯನ್ನು 1957 ರ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿಯಲ್ಲಿ ನಿಗದಿಪಡಿಸಿರುವ ಪ್ರಕ್ರಿಯೆಯನ್ನು ಪಾಲಿಸಿ ವಿಧಿಸಬಹುದಾಗಿರುತ್ತದೆ. ಅದರಂತೆ, ತಾ: 7.1.1993 ರ ಕಾರಣ ಕೇಳುವ ಸೂಚನೆಯನ್ನು ದೋಷಾರೋಪಣಾ ಪಟ್ಟಿ ಇತ್ಯಾದಿಗಳೊಂದಿಗೆ 1957 ರ ಕೆಸಿಎಸ್ (ಸಿಸಿಎ) ನಿಯಮಾವಳಿಯ 11ನೇ ನಿಯಮದಡಿ ಅವರಿಗೆ ನೀಡಿ 15 ದಿನಗಳಲ್ಲಿ ಅವರ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ನಿರ್ದೇಶಿಸಲಾಗಿತ್ತು, ಈ ಮಧ್ಯೆ ಅವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇದ್ದು ದಿನಾಂಕ: 5.1.1993, ಸಂಖ್ಯೆ: ಆಕುಕ 208 ಎಂಪಿಎಸ್ 89 ರ ಅಧಿಸೂಚನೆಯಲ್ಲಿ ಅವರನ್ನು ಕರ್ತವ್ಯದ ಮೇಲೆ ಹಾಜರಾಗಲು ಅನುಮತಿಸಿ ಬಳ್ಳಾರಿಯ ಸರ್ಕಾರಿ ವೈದ್ಯಕೀಯ ಕಾಲೇಜಿನ ಅನಾಟಮಿ ಉಪನ್ಯಾಸಕ ಹುದ್ದೆಯಲ್ಲಿ ನೇಮಿಸಲಾಗಿತ್ತು, ಆದರೆ, ಅದಕ್ಕೂ ವಿಧೇಯಕರಾಗಿ ಅವರು ಪದಗ್ರಹಿಸಿರಲಿಲ್ಲ. ಆದಕಾರಣ ತಾ: 4.11.1994 ರ ಕನ್ನಡ ಪ್ರಭ ಮತ್ತು ತಾ: 13.11.1994 ರ ಡೆಕ್ಕನ್ ಹೆರಾಲ್ಡ್ ನಲ್ಲಿ ತಾ: 29.10.94 ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಅಧಿಸೂಚನೆಯನ್ನು ಪ್ರಕಟಿಸಿ 15 ದಿನಗಳ ಅವಧಿಯಲ್ಲಿ ಕರ್ತವ್ಯಕ್ಕೆ ಹಾಜರಾಗುವಂತೆ ಮತ್ತು ತಪ್ಪಿದ್ದಲ್ಲಿ ಅವರನ್ನು ಸೇವೆಯಿಂದ ವಜಾಗೊಳಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಲಾಗುವುದು ಎಂದು ಎಚ್ಚರಿಕೆ ನೀಡಲಾಗಿತ್ತು, ಅದಕ್ಕಾ ಅವರು ಸ್ಪಂದಿಸಿರಲಿಲ್ಲ. ಆದಕಾರಣ ಅವರ ವಿರುದ್ಧ ವಿವರವಾದ ಇಲಾಖಾ ವಿಚಾರಣೆಯನ್ನು ನಡೆಸುವುದು ಅತ್ಯಗತ್ಯವಾಯಿತು. ಆದಕಾರಣ ತಾ: 9.3.2000 ದ ಸರ್ಕಾರಿ ಆದೇಶದಲ್ಲಿ ನಿವೃತ್ತ ಜಿಲ್ಲಾ ನ್ಯಾಯಾಧೀಶ ಶ್ರೀ. ಎಸ್.ವಿ. ತಿರುಗಲ್ ರವರನ್ನು ವಿಚಾರಣಾ ಪ್ರಾಧಿಕಾರವಾಗಿ ಮತ್ತು ವೈದ್ಯಕೀಯ ಶಿಕ್ಷಣ ಉಪನಿರ್ದೇಶಕರನ್ನು ಮಂಡನಾಧಿಕಾರಿಯಾಗಿ ಮೇಲ್ಕಂಡ ನಿಯಮಾವಳಿಯ 11 (2) ಮತ್ತು 11 (5) (ಸಿ) ನೇ ನಿಯಮದಡಿ ನೇಮಿಸಿ ವಿಚಾರಣಾ ವರದಿಯನ್ನು ಶೀಘ್ರವಾಗಿ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

೨. ತಾ: 5.9.2002 ರಂದು ವಿಚಾರಣಾ ವರದಿಯನ್ನು ನಿರ್ದಿಷ್ಟ findings ನೊಂದಿಗೆ ವಿಚಾರಣಾ ಪ್ರಾಧಿಕಾರವು ಸರ್ಕಾರಕ್ಕೆ ಸಲ್ಲಿಸಿತ್ತು, ಆಪಾದಿತರ ವಿರುದ್ಧ ಮಾಡಲಾಗಿದ್ದ ಆರೋಪಣೆ ಸಾಬೀತಾಗಿದೆ ಎಂಬ findings ಅನ್ನು ವಿಚಾರಣಾ ವರದಿಯಲ್ಲಿ ನೀಡಲಾಗಿತ್ತು, ಅವರಿಗೆ ಒಂದು ಸುಸ್ಪಷ್ಟವಾದ ಅವಕಾಶವನ್ನು ನೀಡುವ ಸಲುವಾಗಿ ತಾ: 5.4.2001 ರ ಸಂಯುಕ್ತ ಕರ್ನಾಟಕದಲ್ಲಿ ಆಪಾದಿತರ ಅನಧಿಕೃತ ಗೈರು ಹಾಜರಿ ಪ್ರಕಟಣೆಯನ್ನು ನೀಡಿ ತಾ: 21.4.2001 ರ ಬೆಳಿಗ್ಗೆ 11.00 ಗಂಟೆಗೆ ನಡೆಯುವ ವಿಚಾರಣೆಯಲ್ಲಿ ಹಾಜರಾಗಲು ತಿಳುವಳಿಕೆ ನೀಡಲಾಗಿತ್ತು, ತಪ್ಪಿದ್ದಲ್ಲಿ ವಿಚಾರಣೆಯನ್ನು ಏಕಪಕ್ಷೀಯವಾಗಿ ನಡೆಸಲಾಗುವುದು ಎಂಬ ಎಚ್ಚರಿಕೆಯನ್ನು ಸಹ ಅದರಲ್ಲಿ ನೀಡಲಾಗಿತ್ತು, ಆದರೆ ಆಪಾದಿತರು ಅದನ್ನು ಬಳಸಿಕೊಂಡಿರಲಿಲ್ಲ.

೩. ತಾ: 18.2.2003 ರ 2 ನೇ ಕಾರಣ ಕೇಳುವ ನೋಟೀಸಿನೊಂದಿಗೆ ವಿಚಾರಣಾ ವರದಿಯನ್ನು ಕಳುಹಿಸಿ 1957 ರ ಕೆಸಿಎಸ್ (ಸಿಸಿಎ) ನಿಯಮಾವಳಿಯ 8 (viii) ನೇ ಮತ್ತು 11 ನೇ ನಿಯಮದೊಂದಿಗೆ ಓದಲಾದ ಕೆಸಿಎಸ್ಆರ್ಎಸ್‌ನ ನಿಯಮದಡಿ ಹಾಗೂ ತಾ: 14.9.2001, ಸಂಖ್ಯೆ: ಸಿಆಸುಇ 18 ಸೇಇವಿ 2001 ರ ಸುತ್ತೋಲೆ ಪ್ರಕಾರ ಸಾಬೀತಾದ ಆರೋಪಗಳಿಗೆ ತಕ್ಕಂತೆ ಏಕೆ ದಂಡನೆಯನ್ನು ವಿಧಿಸಬಾರದು ಎಂಬುದಕ್ಕೆ ಅವರ ಉತ್ತರವನ್ನು 15 ದಿನಗಳ ಅವಧಿಯಲ್ಲಿ ಸಲ್ಲಿಸುವಂತೆ ಅವರಿಗೆ ಕಳುಹಿಸಲಾಗಿತ್ತು, ಆದರೆ, ಅವರು ಅದಕ್ಕೆ ಸ್ಪಂದಿಸಿರಲಿಲ್ಲ. ಆದಾಗ್ಯೂ ಮೇಲ್ಕಂಡ ನಿಯಮಾವಳಿಯ 28-ಎ ನಿಯಮದೊಂದಿಗೆ ಓದಲಾದ 3.11.97, ಸಂಖ್ಯೆ: ಸಿಆಸುಇ 8 ಸೇಇವಿ 84 ರ ಸುತ್ತೋಲೆ ರೀತ್ಯಾ ಅವರಿಗೆ ಮತ್ತೊಂದು ಅಂತಿಮ ಅವಕಾಶವನ್ನು ಸ್ವಾಭಾವಿಕ ನ್ಯಾಯತತ್ವಗಳನುಸಾರ ನೀಡಲು ತಾ: 15.3.2004, ಸಂಖ್ಯೆ: ಆಕುಕ 7 ಎಂಸಿಎಲ್ 2004 ರ ಅಧಿಸೂಚನೆಯನ್ನು ತಾ: 17.4.2004 ರ ಪ್ರಜಾವಾಣಿ ಮತ್ತು ವಿಜಯ ಕರ್ನಾಟಕಗಳಲ್ಲಿ ಪ್ರಕಟಿಸಲಾಗಿತ್ತು, 2 ನೇ ಕಾರಣ ಕೇಳುವ ನೋಟೀಸನ್ನು ಆಪಾದಿತರು 15 ದಿನಗಳ ಅವಧಿಯಲ್ಲಿ ಸರ್ಕಾರವನ್ನು ಸಂಪರ್ಕಿಸಿ ಪಡೆದು ಅದಕ್ಕೆ ಉತ್ತರಿಸಬೇಕೆಂದು ನಿರ್ದೇಶಿಸಲಾಗಿತ್ತು, ನಿಗದಿತ ಕಾಲಾವಧಿ ಅಂತ್ಯಗೊಂಡ ನಂತರ ಆಪಾದಿತರು ಈ ಸದಾವಕಾಶವನ್ನು ಉಪಯೋಗಿಸಿಕೊಂಡಿಲ್ಲ ಎಂದು ಪರಿಭಾವಿಸಿ ಅವರ ವಿರುದ್ಧ ಸಾಬೀತಾಗಿರುವ ದೋಷಾರೋಪಣೆಯ ಸ್ವರೂಪ ಮತ್ತು ತೀವ್ರತೆಗೆ ತಕ್ಕಂತೆ ದಂಡನೆಯನ್ನು ವಿಧಿಸಲಾಗುವುದು ಎಂದು ನಮೂದಿಸಲಾಗಿತ್ತು, ಅವರಿಂದ ಯಾವುದೇ ಪ್ರತಿಕ್ರಿಯೆ ಅಭಿವ್ಯಕ್ತವಾಗಿರುವುದಿಲ್ಲ. ಆದ್ದರಿಂದ ಮೇಲ್ಕಂಡ ಸರ್ಕಾರದ ತಾತ್ವಿಕ ನಿರ್ಧಾರದಂತೆ ಆಪಾದಿತರನ್ನು ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 88 ಎಂಸಿಎಲ್ 2004, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2005**

೪. ಬೆಂಗಳೂರು ವೈದ್ಯಕೀಯ ಕಾಲೇಜಿನ ಅನಾಟಮಿ ಉಪನ್ಯಾಸಕರಾಗಿದ್ದು ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿರುವ ಡಾ: ಕೃಷ್ಣಮೂರ್ತಿ ರವರ ಮೇಲೆ 1957 ರ ಕೆಸಿಎಸ್ (ಸಿಸಿಎ) ನಿಯಮಾವಳಿಯ 8 (viii) ನೇ ನಿಯಮದಡಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ ಮತ್ತು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಲಾಗಿದೆ.

೫. ಬೆಂಗಳೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರು ವಿದ್ಯುಕ್ತವಾದ ಆದೇಶವನ್ನು ಹೊರಡಿಸಿ ಡಾ: ಕೃಷ್ಣಮೂರ್ತಿ ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ತವ್ಯದಿಂದ ವಿಮುಕ್ತಗೊಳಿಸಿ ಅದರ ಪ್ರತಿಯನ್ನು ತ್ವರಿತವಾಗಿ ಸರ್ಕಾರಕ್ಕೆ, ಮಹಾಲೇಖಪಾಲರಿಗೆ (ಎ ಅಂಡ್ ಇ) ಮತ್ತು ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಎಸ್. ನಾಗರಾಜು
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

ಪಿ.ಆರ್. 1302

**ವಿಷಯಃ** ಹುಬ್ಬಳ್ಳಿಯ ಹಿಂದಿನ ಕರ್ನಾಟಕ ವೈದ್ಯಕೀಯ ಕಾಲೇಜಿನ ಮತ್ತು ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ಫಿಜಿಯಾಲಜಿ ಉಪನ್ಯಾಸಕ ಡಾಃ ಅಥಾವುರ್ ರೆಹಮಾನ್ ರವರ ವಿರುದ್ಧ ಇಲಾಖಾ ವಿಚಾರಣೆ.

**ಓದಲಾಗಿದೆಃ**
1) ದಿನಾಂಕಃ 20.2.82, ಸಂಖ್ಯೆಃ ಎಸ್‌ಆರ್‌೭ (3) 62 / 81 -82 ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
2) ದಿನಾಂಕಃ 6.8.82, ಸಂಖ್ಯೆಃ ಆಕುಕ 22 ಎಂಸಿಎಲ್ 82 ರ ಕಾರಣ ಕೇಳುವ ನೋಟೀಸು.
3) ತಾಃ 20.10.87 ರ ಡೆಕ್ಕನ್ ಹೆರಾಲ್ಡ್‌ನಲ್ಲಿ ಪ್ರಕಟಿಸಿದ ತಾಃ 6.8.82 ಸಂಖ್ಯೆಃ ಆಕುಕ 22 ಎಂಸಿಎಲ್ 82 ರ 1957 ರ ಕೆಸಿಎಸ್ (ಸಿಸಿಎ) ನಿಯಮಾವಳಿಯ 11 ನೇ ನಿಯಮದಡಿ ಕಾರಣ ಕೇಳುವ ಸೂಚನೆ ಮತ್ತು ದೋಷಾರೋಪಣೆಯನ್ನೊಳಗೊಂಡ ನಾಲ್ಕು ಅನುಸೂಚಿಗಳು.
4) ತಾಃ 23.11.92, ಸಂಖ್ಯೆಃ ಆಕುಕ 22 ಎಂಸಿಎಲ್ 82 ರ ಸರ್ಕಾರಿ ಆದೇಶ.
5) ದಿನಾಂಕಃ 17.12.92, ಸಂಖ್ಯೆಃ ಆಕುಕ 22 ಎಂಸಿಎಲ್ 82 ರ ಕಾರಣ ಕೇಳುವ ನೋಟೀಸು.
6) ದಿನಾಂಕಃ 4.11.94 ರ ಕನ್ನಡ ಪ್ರಭದಲ್ಲಿ ಮತ್ತು ತಾಃ 13.11.94 ರ ಡೆಕ್ಕನ್ ಹೆರಾಲ್ಡ್ ನಲ್ಲಿ ಪ್ರಕಟಿಸಿದ ತಾಃ 29.10.94 ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಅಧಿಸೂಚನೆ.
7) ತಾಃ 4.4.2000, ಸಂಖ್ಯೆಃ ಆಕುಕ 22 ಎಂಸಿಎಲ್ 82 ರ ಸರ್ಕಾರಿ ಆದೇಶ.
8) ತಾಃ 31.3.2000 ಮತ್ತು 31.3.2000 ರ ಸಂಯುಕ್ತ ಕರ್ನಾಟಕ ಮತ್ತು ಕನ್ನಡ ಪ್ರಭಗಳಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಅನಧಿಕೃತ ಗೈರು ಹಾಜರಿಗೆ ಸಂಬಂಧಿಸಿದ ಅಧಿಸೂಚನೆ.
9) ತಾಃ 31.5.2001 ರ ನಿವೃತ್ತ ಜಿಲ್ಲಾ ನ್ಯಾಯಾಧೀಶರ ಶ್ರೀ. ಎಸ್.ವಿ.ತಿಳಗುಲ್ ರವರ ವಿಚಾರಣಾ ವರದಿ.
10) ತಾಃ 17.4.2004 ರ ಪ್ರಜಾವಾಣಿ ಮತ್ತು ವಿಜಯ ಕರ್ನಾಟಕದಲ್ಲಿ ಪ್ರಕಟಿಸಿದ ತಾಃ 15.3.2004 ಸಂಖ್ಯೆಃ ಆಕುಕ 7 ಎಂಸಿಎಲ್ 2004 ರ ಅಧಿಸೂಚನೆ.

**ಪೀಠಿಕೆಃ**

೧. ವೈದ್ಯಕೀಯ ಶಿಕ್ಷಣ ಇಲಾಖೆಯ ಫಿಜಿಯಾಲಜಿ ಉಪನ್ಯಾಸಕರಾಗಿದ್ದ ಡಾಃ ಅಥಾವುರ್ ರೆಹಮಾನ್‌ರವರು ಹುಬ್ಬಳ್ಳಿಯ ಅಂದಿನ ಕರ್ನಾಟಕ ವೈದ್ಯಕೀಯ ಕಾಲೇಜಿನಲ್ಲಿ (ಈಗ ಕರ್ನಾಟಕ ವೈದ್ಯಕೀಯ ವಿಜ್ಞಾನ ಸಂಸ್ಥೆ) ಫಿಜಿಯಾಲಜಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾಗ ದಿನಾಂಕಃ 23.7.81 ರಿಂದ ದಿನಾಂಕಃ 1.8.81 ರವರೆಗೆ ಹಾಗೂ ದಿನಾಂಕಃ 2.8.81 ರಿಂದ 8.9.81 ರವರೆಗೆ ರಜೆ ಮೇಲೆ ತೆರಳಿದ್ದರು. ನಂತರವೂ ಅವರು ರಜೆ ಅವಧಿ ಅಂತ್ಯಗೊಂಡ ನಂತರ ಕರ್ತವ್ಯಕ್ಕೆ ಹಾಜರಾಗಲಿಲ್ಲ. ಮತ್ತೊಂದು ರಜೆ ಅರ್ಜಿ ಸಲ್ಲಿಸಿ ತಾಃ 9.9.81 ರಿಂದ ತಾಃ 31.11.81 ರವರೆಗೆ ಹಾಗೂ 1.12.81 ರಿಂದ 1.12.82 ರವರೆಗೆ ಒಂದು ವರ್ಷದ ಅವಧಿಗೆ ರಜೆ ಮಂಜೂರು ಮಾಡಲು ಅರ್ಜಿ ಸಲ್ಲಿಸಿದ್ದರು. ತಾಃ 1.12.82 ರ ನಂತರವೂ ಅವರು ಕರ್ತವ್ಯಕ್ಕೆ ಹಾಜರಾಗಲಿಲ್ಲ ಹಾಗೂ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸಿರಲಿಲ್ಲ. ತಾಃ 2.12.81 ರಂದು ಕಾಲೇಜಿನ ಪ್ರಾಂಶುಪಾಲರು ಒಂದು ರಿಕಾಲ್ ನೋಟೀಸನ್ನು ಅವರಿಗೆ ಆರ್‌ಪಿಎಡಿ ಮೂಲಕ ಕಳುಹಿಸಿದ್ದರು. ಆದರೆ ಅದು ಅವರಿಗೆ ಜಾರಿಯಾಗಿರಲಿಲ್ಲ.

೨. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ (ಕೆ.ಸಿ.ಎಸ್.ಆರ್.ಎಸ್) 108 ನೇ ನಿಯಮದಡಿ ಯಾವುದೇ ಸರ್ಕಾರಿ ನೌಕರರು 4 ತಿಂಗಳ ಅವಧಿಗೆ ಮೀರಿ ಕರ್ತವ್ಯದಿಂದ ಅನಧಿಕೃತ ಗೈರು ಹಾಜರಾದಲ್ಲಿ ಅವರನ್ನು ಸೇವೆಯಿಂದ ತೆಗೆದುಹಾಕುವ ಅಥವಾ ವಜಾ ಮಾಡುವ ದಂಡನೆಯನ್ನು 1957 ರ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಯಲ್ಲಿ ನಿಗದಿಪಡಿಸಿರುವ ಪ್ರಕ್ರಿಯೆಯನ್ನು ಪಾಲಿಸಿ ವಿಧಿಸಬಹುದಾಗಿರುತ್ತದೆ. ಅದರಂತೆ ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡುವ ಹಿನ್ನೆಲೆಯಲ್ಲಿ ತಾಃ 6.8.1982 ರ ಕಾರಣ ಕೇಳುವ ಸೂಚನೆಯನ್ನು 1957 ರ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಯ 11 ನೇ ನಿಯಮದಡಿ ನೀಡಲಾಗಿತ್ತು, ಅದರ 4 ಅನುಬಂಧಗಳಲ್ಲಿ ಅವರ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ನೀಡಲಾಗಿತ್ತು, 15 ದಿನಗಳ ಅವಧಿಯಲ್ಲಿ ಅವರ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು, ಆದರೆ, ಅದು ಜಾರಿಯಾಗಿರಲಿಲ್ಲ. ಆದಕಾರಣ ಮತ್ತೆ ನವ್ಯವಾಗಿ ಕಾರಣ ಕೇಳುವ ಸೂಚನೆಯನ್ನು ಮತ್ತು ಅದರ 4 ಅನುಬಂಧಗಳನ್ನು ತಾಃ 31.7.1985 ರ ಸೂಚನೆಯನ್ನು ನೀಡಲು ಪ್ರಸ್ತಾಪಿಸಲಾಯಿತು. ದೋಷಾರೋಪಣೆ ಇತ್ಯಾದಿಗಳನ್ನೊಳಗೊಂಡ 4 ಅನುಬಂಧಗಳ ಸಹಿತ ತಾಃ 6.8.1982, ಸಂಖ್ಯೆಃ ಆಕುಕ 22 ಎಂಸಿಎಲ್ 82 ರ ಕಾರಣ ಕೇಳುವ ನೋಟೀಸನ್ನು ತಾಃ 20.10.1987 ರ ಡೆಕ್ಕನ್ ಹೆರಾಲ್ಡ್ ನಲ್ಲಿ ಪ್ರಕಟಿಸಲಾಯಿತು. 15 ದಿನಗಳಲ್ಲಿ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಅವರಿಗೆ ನಿರ್ದಿಷ್ಟವಾಗಿ ಸೂಚಿಸಲಾಗಿತ್ತು, ಅದಕ್ಕೂ ಸಹ ಅವರು ಸ್ಪಂದಿಸಿರಲಿಲ್ಲ. ಈ ಮಧ್ಯೆ ಕೆಲವು ತಾಂತ್ರಿಕ ದೋಷಗಳನ್ನಾಧರಿಸಿ ತಾಃ 23.11.1992 ರ ಸರ್ಕಾರಿ ಆದೇಶದಲ್ಲಿ ತಾಃ 6.8.1982 ರ ಕಾರಣ ಕೇಳುವ ಸೂಚನೆಯನ್ನು ಹಿಂತೆಗೆದುಕೊಂಡು ಅವರ ವಿರುದ್ಧ ನೂತನವಾಗಿ ಇಲಾಖಾ ವಿಚಾರಣೆ ನಡೆಸುವ ಹಕ್ಕನ್ನು ಕಾಯ್ದಿರಿಸಿಕೊಳ್ಳಲಾಗಿತ್ತು, ಅದರಂತೆ, ತಾಃ 17.12.1992 ರ ಕಾರಣ ಕೇಳುವ ಸೂಚನೆಯಲ್ಲಿ ಮತ್ತೆ ಹೊಸದಾಗಿ ದೋಷಾರೋಪಣಾ ಪಟ್ಟಿಯನ್ನೊಳಗೊಂಡ 4 ಅನುಬಂಧಗಳನ್ನು ಅವರಿಗೆ ಜಾರಿ ಮಾಡಲು ಉದ್ದೇಶಿಸಿ ತಾಃ 17.12.1992 ರಂದು ರವಾನಿಸಲಾಗಿತ್ತು, ಅದೂ ಸಹ ಅವರಿಗೆ ಜಾರಿಯಾಗಿರಲಿಲ್ಲ. ಆದಕಾರಣ ತಾಃ 13.11.1994 ರ ಡೆಕ್ಕನ್ ಹೆರಾಲ್ಡ್‌ನಲ್ಲಿ ಮತ್ತು ತಾಃ 4.11.1994 ರ ಕನ್ನಡ ಪ್ರಭದಲ್ಲಿ ತಾಃ 29.10.1984 ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಅಧಿಸೂಚನೆಯನ್ನು ಪ್ರಕಟಿಸಿ ಅನಧಿಕೃತ ಗೈರು ಹಾಜರಿಯಲ್ಲಿರುವ ವೈದ್ಯರು ಪತ್ರಿಕಾ ಪ್ರಕಟಣೆ ದಿನಾಂಕದಿಂದ 15 ದಿನಗಳ ಒಳಗೆ ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ಅವರನ್ನು 1957 ರ ಕೆಸಿಎಸ್ (ಸಿಸಿಎ) ನಿಯಮಾವಳಿಯ ಪ್ರಕಾರ ಸರ್ಕಾರಿ ಸೇವೆಯಿಂದ ವಜಾ ಮಾಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಲಾಗುವುದೆಂದು ಸುಸ್ಪಷ್ಟವಾಗಿ ಸೂಚಿಸಲಾಗಿತ್ತು, ಅದಕ್ಕೂ ಅವರಿಂದ ಯಾವುದೇ ಪ್ರತಿಕ್ರಿಯೆ ಇರಲಿಲ್ಲ. ತಾಃ 4.2.2000, ಸಂಖ್ಯೆಃ ಆಕುಕ 22 ಎಂಸಿಎಲ್ 82 ರ ಸರ್ಕಾರಿ ಆದೇಶದಲ್ಲಿ ಆಪಾದಿತರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ನಿವೃತ್ತ ಜಿಲ್ಲಾ ನ್ಯಾಯಾಧೀಶ ಡಾಃ ಎಸ್.ವಿ.ತಿಳಗುಲ್ ರವರನ್ನು 11 (2) ನೇ ನಿಯಮದಡಿ ವಿಚಾರಣಾ ಪ್ರಾಧಿಕಾರವಾಗಿ ಮತ್ತು ವೈದ್ಯಕೀಯ ಶಿಕ್ಷಣ ಉಪನಿರ್ದೇಶಕರನ್ನು ಮಂಡನಾಧಿಕಾರಿಯನ್ನಾಗಿ 11(5)(c) ನಿಯಮದಡಿ ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು, 3 ತಿಂಗಳ ಅವಧಿಯಲ್ಲಿ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು,

೩. ಮೇಲ್ಕಂಡ ನಿಯಮಾವಳಿಯ 28-ಎ ನಿಯಮದಡಿ ಅಪಾದಿತರಿಗೆ ವಿಚಾರಣೆಯಲ್ಲಿ ಭಾಗವಹಿಸಲು ಅನುವು ಮಾಡಿಕೊಡುವ ಸಲುವಾಗಿ ತಾಃ 31.3.2000 ದ ಸಂಯುಕ್ತ ಕರ್ನಾಟಕ ಮತ್ತು ಕನ್ನಡ ಪ್ರಭದಲ್ಲಿ ತಾಃ 2.5.2000 ದಂದು ನಡೆಯುವ ವಿಚಾರಣೆಯಲ್ಲಿ ಭಾಗವಹಿಸಲು ತಿಳಿಯಪಡಿಸಲಾಗಿತ್ತು, ಒಂದು ವೇಳೆ ಅವರು ವಿಚಾರಣೆಗೆ ಗೈರು ಹಾಜರಾದಲ್ಲಿ ಏಕಪಕ್ಷೀಯವಾಗಿ ವಿಚಾರಣೆ ನಡೆಸಿ ಸರ್ಕಾರಕ್ಕೆ ವರದಿ ಸಲ್ಲಿಸಲಾಗುವುದೆಂದು ಸ್ಪಷ್ಟವಾಗಿ ತಿಳಿಸಲಾಗಿತ್ತು,

೪. ತಾಃ 21.5.2001 ರ ವಿಚಾರಣಾ ಪ್ರಾಧಿಕಾರರವರ ವರದಿಯಲ್ಲಿ ಆಪಾದಿತರ ವಿರುದ್ಧ ಮಾಡಲಾಗಿದ್ದ ಆರೋಪಣೆ ಸಾಬೀತಾಗಿದೆ ಎಂಬ findings ನೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಿದ್ದರು. ಅವರು ವಿಚಾರಣೆಯಲ್ಲಿ ಭಾಗವಹಿಸದ ಕಾರಣ ಅವರಿಗೆ 2 ನೇ ಕಾರಣ ಕೇಳುವ ಸೂಚನೆಯನ್ನು ನೀಡಿರಲಿಲ್ಲ.

೫. ಆಪಾದಿತರಿಗೆ ಮತ್ತೊಂದು ಅವಕಾಶವನ್ನು ನೀಡುವುದು ಸಮುಚಿತವೆಂದು ಪರಿಗಣಿಸಿದ ಸರ್ಕಾರವು ತಾಃ 15.3.2004 ಸಂಖ್ಯೆಃ ಆಕುಕ 7 ಎಂಸಿಎಲ್ 2004 ರ ಅಧಿಸೂಚನೆಯನ್ನು ತಾಃ 17.4.2004 ರ ಪ್ರಜಾವಾಣಿ ಮತ್ತು ವಿಜಯ ಕರ್ನಾಟಕದಲ್ಲಿ ಪ್ರಕಟಿಸಿ 15 ದಿನಗಳ ಅವಧಿಯಲ್ಲಿ ಸರ್ಕಾರವನ್ನು ಸಂಪರ್ಕಿಸಿ 2 ನೇ ಕಾರಣ ಕೇಳುವ ಶೋಕಾಸ್ ನೋಟೀಸನ್ನು ಪಡೆದು ಉತ್ತರಗಳನ್ನು ಸಲ್ಲಿಸಲು ಸೂಚಿಸಿ ಈ ಸದಾವಕಾಶವನ್ನು ಉಪಯೋಗಿಸಿಕೊಳ್ಳದಿದ್ದಲ್ಲಿ ಅದರಂತೆ ಪರಿಭಾವಿಸಿ ಆಪಾದಿತರ ವಿರುದ್ಧ ಸಾಬೀತಾಗಿರುವ ದೋಷಾರೋಪಣೆಯ ಸ್ವರೂಪ ಮತ್ತು ತೀವ್ರತೆಗೆ ತಕ್ಕಂತಹ ದಂಡನೆಯನ್ನು ವಿಧಿಸಲಾಗುವುದು ಎಂದು ಸುಸ್ಪಷ್ಟವಾಗಿ ನಮೂದಿಸಲಾಗಿತ್ತು. ಆಪಾದಿತರು ಅದಕ್ಕೆ ಪ್ರತಿಕ್ರಿಯಿಸಿಲ್ಲ. ಆದ್ದರಿಂದ ಮೇಲ್ಕಂಡ ಸರ್ಕಾರದ ತಾತ್ವಿಕ ನಿರ್ಧಾರದಂತೆ ಅವರನ್ನು ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆಃ ಆಕುಕ 89 ಎಂಸಿಎಲ್ 2004, ಬೆಂಗಳೂರು, ದಿನಾಂಕಃ 18ನೇ ಆಗಸ್ಟ್ 2005**

೬. ಹುಬ್ಬಳ್ಳಿಯ ಹಿಂದಿನ ಕರ್ನಾಟಕ ವೈದ್ಯಕೀಯ ಕಾಲೇಜಿನ ಮತ್ತು ಈಗ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ಫಿಜಿಯಾಲಜಿ ಉಪನ್ಯಾಸಕರಾಗಿದ್ದು ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿರುವ ಡಾಃ ಅಥಾವುರ್ ರೆಹಮಾನ್ ರವರ ಮೇಲೆ 1957 ರ ಕೆಸಿಎಸ್ (ಸಿಸಿಎ) ನಿಯಮಾವಳಿಯ 8 (viii) ನೇ ನಿಯಮದಡಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ ಮತ್ತು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಲಾಗಿದೆ.

೭. ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ನಿರ್ದೇಶಕರು ವಿಧ್ಯುಕ್ತವಾದ ಆದೇಶವನ್ನು ಹೊರಡಿಸಿ ಡಾಃ ಅಥಾವುರ್ ರೆಹಮಾನ್ ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ತವ್ಯದಿಂದ ವಿಮುಕ್ತಗೊಳಿಸಿ ಅದರ ಪ್ರತಿಯನ್ನು ತ್ವರಿತವಾಗಿ ಸರ್ಕಾರಕ್ಕೆ, ಮಹಾಲೇಖಪಾಲರಿಗೆ (ಎ ಅಂಡ್ ಇ) ಮತ್ತು ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್. 1303

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

**ವಿಷಯಃ** ಬೆಂಗಳೂರಿನ ಸರ್ಕಾರಿ ದಂತ ಕಾಲೇಜಿನ ಪೆರಿಯೋ ಡಾಂಟಿಕ್ಸ್ ಉಪನ್ಯಾಸಕ ಡಾಃ ಬಿ. ಮೋಹನ್‌ರಾಮ್‌ರವರ ವಿರುದ್ಧ ಇಲಾಖಾ ವಿಚಾರಣೆ.

**ಓದಲಾಗಿದೆಃ**
1) ದಿನಾಂಕಃ 25.9.87, ಸಂಖ್ಯೆಃ ವಾಶ್ರೇಅ (3) 119 / 86 - 87 ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
2) ದಿನಾಂಕಃ 2.11.88, ಸಂಖ್ಯೆಃ ಆಕುಕ 7 ಎಂಸಿಎಲ್ 86 ರ ಕಾರಣ ಕೇಳುವ ನೋಟೀಸು.
3) ತಾಃ 9.4.92 ರ ಕನ್ನಡ ಪ್ರಭದಲ್ಲಿ ಪ್ರಕಟಿಸಿದ ತಾಃ 2.11.88 ಸಂಖ್ಯೆಃ ಆಕುಕ 7 ಎಂಸಿಎಲ್ 88 ರ ಸೂಚನೆ ಮತ್ತು ಅದರ ನಾಲ್ಕು ಅನುಬಂಧಗಳು.
4) ತಾಃ 29.10.92, ಸಂಖ್ಯೆಃ ಆಕುಕ 7 ಎಂಸಿಎಲ್ 88 ರ ಸರ್ಕಾರಿ ಆದೇಶ.
5) ದಿನಾಂಕಃ 9.10.92 ಸಂಖ್ಯೆಃ ಆಕುಕ 7 ಎಂಸಿಎಲ್ 88ರ ಕಾರಣ ಕೇಳುವ ನೋಟೀಸು ಮತ್ತು ನಾಲ್ಕು ಅನುಬಂಧಗಳು.
6) ತಾಃ 4.11.94 ರ ಕನ್ನಡ ಪ್ರಭ ಮತ್ತು 13.11.94 ರ ಡೆಕ್ಕನ್ ಹೆರಾಲ್ಡ್‌ನಲ್ಲಿ ಪ್ರಕಟಿಸಿದ ತಾಃ 29.10.94 ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಅಧಿಸೂಚನೆ.
7) ತಾಃ 18.12.99, ಸಂಖ್ಯೆಃ ಆಕುಕ 7 ಎಂಸಿಎಲ್ 88 ರ ಸರ್ಕಾರಿ ಆದೇಶ.
8) ತಾಃ 11.5.2001 ರ ನಿವೃತ್ತ ಜಿಲ್ಲಾಧೀಶರ ಶ್ರೀ. ಎಸ್.ವಿ. ತಿಳಗುಲ್ ರವರ ವಿಚಾರಣಾ ವರದಿ.
9) ತಾಃ 31.8.2001, ಸಂಖ್ಯೆಃ ಪಿಎಸ್‌ಸಿ 35 ಸಿಎನ್‌ಎಸ್ 2001 ರ ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ.
10) ತಾಃ 24.4.2002 ಸಂಖ್ಯೆಃ ಆಕುಕ 7 ಎಂಸಿಎಲ್ 88 ರ 2 ನೇ ಕಾರಣ ಕೇಳುವ ನೋಟೀಸು
11) ತಾಃ 17.4.2004 ರ ಪ್ರಜಾವಾಣಿ ಮತ್ತು ವಿಜಯ ಕರ್ನಾಟಕದಲ್ಲಿ ಪ್ರಕಟಿಸಿದ ತಾಃ 15.3.2004 ಸಂಖ್ಯೆಃ ಆಕುಕ 7 ಎಂಸಿಎಲ್ 2004 ರ ಅಧಿಸೂಚನೆ.

**ಪೀಠಿಕೆಃ**

೧. ಸರ್ಕಾರಿ ದಂತ ಕಾಲೇಜಿನ ಪೆರಿಯೋ ಡಾಂಟಿಕ್ಸ್ ಉಪನ್ಯಾಸಕರಾದ ಡಾಃ ಬಿ. ಮೋಹನ್‌ರಾಮ್‌ರವರು ದಿನಾಂಕಃ 11.2.85 ರಿಂದ ದಿನಾಂಕಃ 2.3.85 ರವರೆಗೆ ರಜೆ ಮೇಲೆ ತೆರಳಿ ತಾಃ 3.3.85 ರಂದು ಕರ್ತವ್ಯಕ್ಕೆ ಹಿಂತಿರುಗದೆ ಅಥವಾ ರಜೆ ವಿಸ್ತರಣೆಗೆ ಅರ್ಜಿಯನ್ನು ಸಲ್ಲಿಸದೆ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿದ್ದರು. ತಾಃ 10.12.86 ರಂದು ಕಳುಹಿಸಿದ್ದ Recall Notice ಜಾರಿಯಾಗದೆ ಹಿಂತಿರುಗಿತ್ತು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ (ಕೆಸಿಎಸ್‌ಆರ್‌ಎಸ್) 108 ನೇ ನಿಯಮದಡಿ ಯಾವುದೇ ಸರ್ಕಾರಿ ನೌಕರರು 4 ತಿಂಗಳಿಗೆ ಅವಧಿಗೆ ಮೀರಿ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾದಲ್ಲಿ ಅವರನ್ನು ಸೇವೆಯಿಂದ ತೆಗೆದು ಹಾಕುವ ಅಥವಾ ವಜಾ ಮಾಡುವ ದಂಡನೆಯನ್ನು 1957 ರ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿಯಲ್ಲಿ ನಿಗದಿಪಡಿಸಿರುವ ಪ್ರಕ್ರಿಯೆಯನ್ನು ಪಾಲಿಸಿ ವಿಧಿಸಬಹುದಾಗಿರುತ್ತದೆ. ಅದರಂತೆ, ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಹೂಡುವ ಹಿನ್ನೆಲೆಯಲ್ಲಿ ದಿನಾಂಕಃ 2.11.88 ರ ಕಾರಣ ಕೇಳುವ ನೋಟೀಸನ್ನು 1957 ರ ಕೆಸಿಎಸ್ (ಸಿಸಿಎ) ನಿಯಮಾವಳಿಯ 11 ನೇ ನಿಯಮದಡಿ ನೀಡಲಾಗಿತ್ತು, 15 ದಿನಗಳಲ್ಲಿ ಅವರ ಲಿಖಿತ ರಕ್ಷಣಾ ಹೇಳಿಕೆಯನ್ನು ಅವರ ವಿರುದ್ಧ ರೂಪಿಸಲಾಗಿರುವ ದೋಷಾರೋಪಣೆಯ ವೇಳೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು, ಆದರೆ ಅವರು ಅದಕ್ಕೆ ಸ್ಪಂದಿಸಿರಲಿಲ್ಲ. ಅಲ್ಲದೆ ವಿಳಾಸದಾರರು India ಬಿಟ್ಟಿದ್ದಾರೆ ಎಂಬ ಹಿಂಬರಹದೊಂದಿಗೆ ಅವರಿಗೆ ಜಾರಿ ಮಾಡಲಾಗಿದ್ದ ನೋಟೀಸ್ ಹಿಂತಿರುಗಿತ್ತು, ಆದಕಾರಣ ಮೇಲ್ಕಂಡ ನಿಯಮಾವಳಿಯ 28 -ಎ ನೇ ನಿಯಮದಡಿ ತಾಃ 9.4.92 ರ ಕನ್ನಡ ಪ್ರಭದಲ್ಲಿ ತಾಃ 2.11.88 ರ ಕಾರಣ ಕೇಳುವ ನೋಟೀಸನ್ನು ಪ್ರಕಟಿಸಲಾಗಿತ್ತು, ಅದಕ್ಕೂ ಅವರಿಂದ ಯಾವುದೇ ಪ್ರತಿಕ್ರಿಯೆ ಇರಲಿಲ್ಲ. ವಿಚಾರಣಾ ಪ್ರಾಧಿಕಾರವನ್ನು ನೇಮಿಸುವ ಏತನ್ಮಧ್ಯೆ ಕೆಲವು ತಾಂತ್ರಿಕ ದೋಷಯುಕ್ತವನ್ನು ಆಧರಿಸಿ ತಾಃ 29.10.92 ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ರೂಪಿಸಲಾಗಿದ್ದ ದೋಷಾರೋಪಣಾ ಪಟ್ಟಿಯನ್ನು ಒಳಗೊಂಡ ತಾಃ 2.11.88 ರ ಕಾರಣ ಕೇಳುವ ಸೂಚನೆಯನ್ನು ಹಿಂತೆಗೆದುಕೊಂಡು ಅವರ

ವಿರುದ್ಧ ನವ್ಯವಾಗಿ ಇಲಾಖಾ ವಿಚಾರಣೆ ನಡೆಸುವ ಹಕ್ಕನ್ನು ಕಾಯ್ದಿರಿಸಿಕೊಳ್ಳಲಾಗಿತ್ತು, ಅನಂತರ ತಾಃ 9.10.92 ರ ಕಾರಣ ಕೇಳುವ ನೋಟೀಸನ್ನು ಅಪಾದಿತರ ವಿರುದ್ಧ ನೂತನವಾಗಿ ರೂಪಿಸಿದ ದೋಷಾರೋಪಣೆಯನ್ನು ತಯಾರಿಸಿ ಅದಕ್ಕೆ ಪೂರಕವಾದ ನಾಲ್ಕು ಅನುಬಂಧಗಳಲ್ಲಿ ಅಪಾದಿತರಿಗೆ ಜಾರಿ ಮಾಡಲು ಕಳುಹಿಸಲಾಗಿತ್ತು, ಆದರೆ ಅದು ಅಪಾದಿತರ ಮೇಲೆ ಜಾರಿಯಾಗಿರಲಿಲ್ಲ. ಆದಕಾರಣ ತಾಃ 4.11.94 ರ ಕನ್ನಡ ಪ್ರಭದಲ್ಲಿ ಮತ್ತು ತಾಃ 13.11.94 ರ ಡೆಕ್ಕನ್ ಹೆರಾಲ್ಡ್ ನಲ್ಲಿ ತಾಃ 29.10.94 ರ ವೈದ್ಯಕೀಯ ಶಿಕ್ಷಣ ಉಪನಿರ್ದೇಶಕರ ಅಧಿಸೂಚನೆಯನ್ನು ಪ್ರಕಟಿಸಿ 15 ದಿನಗಳ ಅವಧಿಯಲ್ಲಿ ಕರ್ತವ್ಯಕ್ಕೆ ಹಿಂತಿರುಗಲು ತಪ್ಪಿದ್ದಲ್ಲಿ 1957 ರ ಕೆಸಿಎಸ್ (ಸಿಸಿಎ) ನಿಯಮಾವಳಿಯ ಪ್ರಕಾರ ಸೇವೆಯಿಂದ ವಜಾ ಮಾಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಲಾಗುವುದು ಎಂದು ಸೂಚಿಸಲಾಗಿತ್ತು, ಅದಕ್ಕೂ ಅವರು ಸ್ಪಂದಿಸಿರಲಿಲ್ಲ. ಆದಕಾರಣ ತಾಃ 18.12.99 ರ ಸರ್ಕಾರಿ ಆದೇಶದಲ್ಲಿ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ. ಎಸ್. ವಿ. ತಿರುಗಲ್ ರವರನ್ನು ವಿಚಾರಣಾ ಪ್ರಾಧಿಕಾರವಾಗಿ ಮತ್ತು ವೈದ್ಯಕೀಯ ಶಿಕ್ಷಣ ಉಪನಿರ್ದೇಶಕರನ್ನು ಮಂಡನಾಧಿಕಾರಿಯಾಗಿ ನೇಮಿಸಿ ಮೇಲ್ಕಂಡ ನಿಯಮಾವಳಿಯ 11 (2) ಮತ್ತು 11 (5) (ಸಿ) ನೇ ನಿಯಮದಡಿ ನೇಮಿಸಿ ವಿಚಾರಣಾ ವರದಿಯನ್ನು ಶೀಘ್ರವಾಗಿ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

೨. ದಿನಾಂಕಃ 11.1.2005 ರ ವಿಚಾರಣಾ ವರದಿಯಲ್ಲಿ ಅಪಾದಿತರ ವಿರುದ್ಧ ಮಾಡಲಾಗಿದ್ದ ಆರೋಪಣೆ ಸಾಬೀತಾಗಿದೆ ಎಂಬ Findings ನೊಂದಿಗೆ ವಿಚಾರಣಾ ವರದಿಯನ್ನು ನೀಡಿದ್ದರು. ಅಪಾದಿತರು ವಿಚಾರಣೆ ಹಾಜರಾಗದೆ ಏಕಪಕ್ಷೀಯವಾಗಿ ವಿಚಾರಣೆಯನ್ನು ನಡೆಸಲಾಗಿದ್ದುದ್ದರಿಂದ ಅವರಿಗೆ 2 ನೇ ಕಾರಣ ಕೇಳುವ ಸೂಚನೆಯನ್ನು ಜಾರಿ ಮಾಡಿರಲಿಲ್ಲ.

೩. ಕೆ.ಸಿ.ಎಸ್.ಆರ್.ಎಸ್. ನ 108 ನೇ ನಿಯಮದೊಂದಿಗೆ ಓದಲಾದ ತಾಃ 14.9.2001 ಸಂಖ್ಯೆಃ ಸಿಆಸುಇ 18 ಸೇಇವಿ 2001ರ ಸುತ್ತೋಲೆಯನ್ನು ಉದ್ದರಿಸಿ 1957 ರ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಯ 8 (viii) ನೇ ನಿಯಮದಡಿ ಅಪಾದಿತರ ಮೇಲೆ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ನಿರ್ಧರಿಸಲಾಯಿತು. ಅದರಂತೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಪಡೆಯಲಾಯಿತು.

೪. ಅಪಾದಿತರಿಗೆ ಮತ್ತೊಂದು ಅವಕಾಶವನ್ನು ನೀಡುವುದು ಸಮುಚಿತವೆಂದು ಪರಿಗಣಿಸಿದ ಸರ್ಕಾರವು ತಾಃ 15.3.2004 ಸಂಖ್ಯೆಃ ಆಕುಕ 7 ಎಂಸಿಎಲ್ 2004 ರ ಅಧಿಸೂಚನೆಯನ್ನು ತಾಃ 17.4.2004 ರ ಪ್ರಜಾವಾಣಿ ಮತ್ತು ವಿಜಯ ಕರ್ನಾಟಕದಲ್ಲಿ ಪ್ರಕಟಿಸಿ 15 ದಿನಗಳ ಅವಧಿಯಲ್ಲಿ ಸರ್ಕಾರವನ್ನು ಸಂಪರ್ಕಿಸಿ 2 ನೇ ಕಾರಣ ಕೇಳುವ ಶೋಕಾಸ್ ನೋಟೀಸನ್ನು ಪಡೆದು ಉತ್ತರಗಳನ್ನು ಸಲ್ಲಿಸಲು ಸೂಚಿಸಿ ಈ ಸದಾವಕಾಶವನ್ನು ಉಪಯೋಗಿಸಿಕೊಳ್ಳದಿದ್ದಲ್ಲಿ ಅದರಂತೆ ಪರಿಭಾವಿಸಿ ಅಪಾದಿತರ ವಿರುದ್ಧ ಸಾಬೀತಾಗಿರುವ ದೋಷಾರೋಪಣೆಯ ಸ್ವರೂಪ ಮತ್ತು ತೀವ್ರತೆಗೆ ತಕ್ಕಂತಹ ದಂಡನೆಯನ್ನು ವಿಧಿಸಲಾಗುವುದು ಎಂದು ಸುಸ್ಪಷ್ಟವಾಗಿ ನಮೂದಿಸಲಾಗಿತ್ತು, ಅಪಾದಿತರು ಅದಕ್ಕೆ ಪ್ರತಿಕ್ರಿಯಿಸಿಲ್ಲ. ಆದ್ದರಿಂದ ಮೇಲ್ಕಂಡ ಸರ್ಕಾರದ ತಾತ್ವಿಕ ನಿರ್ಧಾರದಂತೆ ಅವರನ್ನು ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆಃ ಆಕುಕ 23 ಎಂಸಿಎಲ್ 2004, ಬೆಂಗಳೂರು, ದಿನಾಂಕಃ 18ನೇ ಆಗಸ್ಟ್ 2005**

೫. ಬೆಂಗಳೂರಿನ ಸರ್ಕಾರಿ ದಂತ ಕಾಲೇಜಿನ ಪೆರಿಯೋ ಡಾಂಟಿಕ್ಸ್ ಉಪನ್ಯಾಸಕರಾಗಿದ್ದು ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿರುವ ಡಾಃ ಬಿ. ಮೋಹನ್‌ರಾಮ್ ರವರ ಮೇಲೆ 1957 ರ ಕೆಸಿಎಸ್ (ಸಿಸಿಎ) ನಿಯಮಾವಳಿಯ 8 (viii) ನೇ ನಿಯಮದಡಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ ಮತ್ತು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಲಾಗಿದೆ.

೬. ಬೆಂಗಳೂರಿನ ಸರ್ಕಾರಿ ದಂತ ಕಾಲೇಜಿನ ಪ್ರಾಂಶುಪಾಲರು ವಿದ್ಯುಕ್ತವಾದ ಆದೇಶವನ್ನು ಹೊರಡಿಸಿ ಡಾಃ ಬಿ. ಮೋಹನ್‌ರಾಮ್ ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ತವ್ಯದಿಂದ ವಿಮುಕ್ತಗೊಳಿಸಿ ಅದರ ಪ್ರತಿಯನ್ನು ತ್ವರಿತವಾಗಿ ಸರ್ಕಾರಕ್ಕೆ, ಮಹಾಲೇಖಪಾಲರಿಗೆ (ಎ ಅಂಡ್ ಇ) ಮತ್ತು ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಎಸ್. ನಾಗರಾಜು
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

ಪಿ.ಆರ್. 1304

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ:** ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯ ಸ್ಥಾಪನೆ ಕುರಿತು.

**ಓದಲಾಗಿದೆ:** 1. ಕಾನೂನು ಇಲಾಖೆಯ ಪಾಲಿಸಿ ಪೇಪರ್ ಮತ್ತು ಆಕ್ಷನ್ ಪ್ಲಾನ್.

**ಪ್ರಸ್ತಾವನೆ:**

ಉಲ್ಲೇಖ (1)ರಲ್ಲಿ ಓದಲಾದ ಕಾನೂನು ಇಲಾಖೆಯ ನೀತಿ ಮತ್ತು ಕಾರ್ಯ ಯೋಜನೆಗೆ ಸಂಬಂಧಿಸಿದಂತೆ ಪ್ರಾಯೋಜಿತ ಕಾರ್ಯಕ್ರಮಗಳಿಗೆ ಸಚಿವ ಸಂಪುಟವು ದಿನಾಂಕ 3.3.2005ರ ಸಭೆಯಲ್ಲಿ ಅನುಮೋದನೆ ನೀಡಿದೆ. ಈ ಕಾರ್ಯ ಯೋಜನೆಯ ಉದ್ದೇಶಗಳ 19ನೇ ಅಂಕಣದಲ್ಲಿ ರಾಜ್ಯ ಕಾನೂನು ಸುಧಾರಣೆ ಮತ್ತು ಪ್ರಸ್ತುತ ಜಾರಿಯಲ್ಲಿರುವ ಕಾನೂನುಗಳು ಮತ್ತು ಹೊಸ ಅಧಿನಿಯಮಗಳ ರಚನೆ ಕುರಿತಾದ ಒಂದು ಕೇಂದ್ರವನ್ನು ಸ್ಥಾಪಿಸಲು ಕ್ರಮ ಕೈಗೊಳ್ಳಬೇಕಾಗಿದೆ. ಅದೇ ರೀತಿ ಕಾರ್ಯ ಯೋಜನೆಯ 13ನೇ ಅಂಕಣದ ಅಡಿಯಲ್ಲಿ ಕಾನೂನು ಸುಧಾರಣೆ ಹಾಗೂ ಕಾನೂನು ರಚನೆ, ವರ್ಕ್ ಶಾಪ್‌ಗಳು, ಸಿಂಪೋಸಿಯಾ, ಮುಂತಾದವುಗಳನ್ನು ಏರ್ಪಡಿಸುವುದು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಕೆಲವು ಕಾನೂನು ರಚನೆ ಕಾರ್ಯಗಳನ್ನು ಕೈಗೆತ್ತಿಕೊಳ್ಳುವುದು, ಸಂಶೋಧನೆ ನಡೆಸುವುದು ಮತ್ತು ಈ ಕೆಳಕಂಡ ಉದ್ದೇಶಗಳಿಗಾಗಿ ಒಂದು ಸಂಸ್ಥೆಯನ್ನು ಕರ್ನಾಟಕ ಸೊಸೈಟೀಸ್ ರಿಜಿಸ್ಟ್ರೇಷನ್ ಆಕ್ಟ್, 1961, ಇದರ ಅಡಿಯಲ್ಲಿ ಒಂದು ಸಂಘವನ್ನಾಗಿ ಸ್ಥಾಪಿಸಬೇಕಾಗಿದೆ. ಈ ಪ್ರಸ್ತಾವನೆಗೆ ಮಾನ್ಯ ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವರು ಹಾಗೂ ಮಾನ್ಯ ಮುಖ್ಯ ಮಂತ್ರಿಯವರು ಅನುಮೋದನೆ ನೀಡಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 88 ಆಡಳಿತ 2005(ಭಾಗ), ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ಹೇಳಲಾದ ಯೋಜನೆಯನ್ವಯ ಈ ಕೆಳಕಂಡ ಧ್ಯೇಯೋದ್ದೇಶಗಳನ್ನು ಹೊಂದಿರುವ ಮತ್ತು ತಾತ್ಕಾಲಿಕವಾಗಿ ಕೊಠಡಿ ಸಂಖ್ಯೆ.136, 1ನೇ ಮಹಡಿ, ವಿಧಾನ ಸೌಧ, ಬೆಂಗಳೂರು, ಇಲ್ಲಿ ಕಛೇರಿಯನ್ನು ಹೊಂದಿರುವ, ಈ ಕೆಳಕಂಡ ಪ್ರವರ್ತಕರನ್ನು ಒಳಗೊಂಡ ಒಂದು ಸಂಘವನ್ನು ನೋಂದಾಯಿಸಲು ಹಾಗೂ ಇದಕ್ಕೆ ಸಂಬಂಧಪಟ್ಟ Memorandum of Association ಮತ್ತು ನಿಬಂಧನೆಗಳನ್ನು ಕರ್ನಾಟಕ ಸೊಸೈಟೀಸ್ ರಿಜಿಸ್ಟ್ರೇಷನ್ ಆಕ್ಟ್, 1961 ಇದರ ಅಡಿಯಲ್ಲಿ ನೋಂದಾಯಿಸಲು ಆದೇಶಿಸಲಾಗಿದೆ.

**ಸಂಸ್ಥೆಯ ಧ್ಯೇಯೋದ್ದೇಶಗಳು:-** ಸಂಸ್ಥೆಯ ಧ್ಯೇಯೋದ್ದೇಶಗಳು ಈ ಮುಂದಿನಂತಿವೆ:-

(ಎ) ಸಂಸದೀಯ ಪ್ರಜಾಪ್ರಭುತ್ವಕ್ಕೆ ಬದ್ಧವಾದ ಒಂದು ಅಭಿವೃದ್ಧಿಶೀಲ ರಾಷ್ಟ್ರದ ನೆಲೆಗಟ್ಟಿನಲ್ಲಿ ಕಾನೂನು ಮತ್ತು ಸಂಸದೀಯ ಪದ್ಧತಿಗಳಲ್ಲಿ ಸುಧಾರಣೆಯನ್ನು ತರುವಂತಹ ಒಂದು ಉನ್ನತ ವೇದಿಕೆಯಾಗಿ ಈ ಸಂಸ್ಥೆಯ ಪೂರ್ಣಾಭಿವೃದ್ಧಿಯನ್ನು ಸಾಧಿಸುವುದು.

(ಬಿ) ಸಾಮಾಜಿಕ ಮುನ್ನಡೆಯನ್ನು ಸಾಧಿಸಲು ಕಾನೂನಿನ ವಿವಿಧ ವ್ಯಾಸಂಗ ವಿಷಯಗಳ ಅಧ್ಯಯನ ಮತ್ತು ಸಂಶೋಧನೆಯ ಉನ್ನತ ಕೇಂದ್ರವಾಗಿ ಈ ಸಂಸ್ಥೆಯನ್ನು ಯೋಜಿಸಿ ಅಭಿವೃದ್ಧಿಪಡಿಸುವುದು.

(ಸಿ) ಕಾನೂನು ಮತ್ತು ರಾಜಕೀಯ ಆಡಳಿತದ ಬುನಾದಿ ತತ್ವಗಳನ್ನು ಕಂಡುಹಿಡಿಯುವುದಕ್ಕಾಗಿ ಪ್ರಾಚೀನ ಕಾಲದ ಕಾನೂನು ಹಾಗೂ ಆಡಳಿತದ ಪದ್ಧತಿಗಳ ತೌಲನಿಕ ಅಧ್ಯಯನವನ್ನು ಮಾಡುವುದು.

(ಡಿ) ಬದಲಾಗುತ್ತಿರುವ ಸಾಮಾಜಿಕ ರೂಢಿ ಸಂಪ್ರದಾಯಗಳ ಹಿನ್ನೆಲೆಯಲ್ಲಿ ಕಾನೂನಿನ ಸಾಂದರ್ಭಿಕ ಅರ್ಥ ಮತ್ತು ಒಳಾಂಶಗಳ ಐತಿಹಾಸಿಕ ಬೆಳವಣಿಗೆಯನ್ನು ಅಧ್ಯಯನ ಮಾಡುವುದು ಮತ್ತು ಮುಂಬರುವ ದಿನಗಳಿಗಾಗಿ ಕಾನೂನು ಮತ್ತು ನ್ಯಾಯ ನೀಡಿಕೆ ಪದ್ಧತಿಗಳು ಹೇಗಿರಬೇಕು ಎಂಬುದನ್ನು ರೂಪಿಸುವುದು.

(ಇ) ಪ್ರಸ್ತುತ ಜಾರಿಯಲ್ಲಿರುವ ಕಾನೂನುಗಳ ನಿಯತಕಾಲಿಕ ಪರಿಶೀಲನೆ ಕೈಗೊಂಡು, ಅವಶ್ಯವಿರುವಲೆಲ್ಲಾ ಸೂಕ್ತ ತಿದ್ದುಪಡಿಗಳನ್ನು ಸಲಹೆ ಮಾಡುವುದು.

(ಎಫ್) ಇದುವರೆಗೂ ಕಾನೂನಿನ ಮೂಲಕ ನಿಯಂತ್ರಿಸಿರದ ಚಟುವಟಿಕೆಗಳನ್ನು ನಿಯಂತ್ರಿಸಲು ಜಾರಿಗೆ ತರಬೇಕಾದ ಕಾನೂನುಗಳನ್ನು ರಚಿಸುವುದು.

(ಜಿ) ಸಂಸದೀಯ ವ್ಯವಸ್ಥೆಯು ಹೆಚ್ಚು ಸಮಂಜಸ ಹಾಗೂ ಉಪಯುಕ್ತವಾಗುವಂತೆ ಮಾಡಲು ಸಂಸದೀಯ ಪದ್ಧತಿಗಳು ಹಾಗೂ ಸಂಸದೀಯ ಚರ್ಚಾ ತಂತ್ರಗಳ ಅಧ್ಯಯನ ಮತ್ತು ಸಂಶೋಧನೆಗೆ ಅವಕಾಶ ಕಲ್ಪಿಸುವುದು

(ಎಚ್) ಸಂಸದೀಯ ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವುದು ಮತ್ತು ಕಾನೂನು ರಚನೆಯ ಸಂಬಂಧದಲ್ಲಿ ಜನ ಸಮಾಲೋಚನೆಗಾಗಿ ಸಾರ್ವಜನಿಕ ವೇದಿಕೆಗಳನ್ನು ರಚಿಸುವುದು.

(ಐ) ಕಾನೂನು ಮತ್ತು ನ್ಯಾಯ ನೀಡಿಕೆ ಪದ್ಧತಿಗಳ ಬಗ್ಗೆ ಸಾರ್ವತ್ರಿಕ ಜಾಗೃತಿ ಮೂಡಿಸುವುದು ಮತ್ತು ಧೀಮಂತ ಸಮುದಾಯಗಳ ಮೂಲಕ ಜನಭಿಪ್ರಾಯ ಪಡೆದು ಕ್ರೋಢೀಕರಿಸುವುದು.

(ಜೆ) ಆನ್‌ಲೈನ್ ಕಾನೂನು ಸಲಹೆ ಮತ್ತು ವಿವಾದ ನಿರ್ಣಯಗಳನ್ನು ಒದಗಿಸುವ ದೃಷ್ಟಿಯಿಂದ ನ್ಯಾಯಿಕ ವ್ಯವಸ್ಥೆಯ ಪ್ರಗತಿಯ ಕಾರ್ಯಕ್ಕೆ ಮಾಹಿತಿ ತಂತ್ರಜ್ಞಾನ ಮತ್ತು ಕಂಪ್ಯೂಟರ್ ವ್ಯವಸ್ಥೆಯನ್ನು ತೊಡಗಿಸಿಕೊಳ್ಳುವ ವಿಧಾನಗಳನ್ನು ರೂಪಿಸುವುದು.

(ಕೆ) ಸಂಶೋಧನಾ ಕೇಂದ್ರಗಳನ್ನು, ಕಾನೂನು ಸೇವಾ ಕೇಂದ್ರಗಳನ್ನು ಮತ್ತು ವಿವಾದ ಪರಿಹಾರದ ಪರ್ಯಾಯ ವ್ಯವಸ್ಥೆಗಳನ್ನು ಸ್ಥಾಪಿಸುವುದು.

(ಎಲ್) ಸಮ್ಮೇಳನಗಳು, ವಿಚಾರಗೋಷ್ಠಿಗಳು, ಅಧ್ಯಯನ ಶಿಬಿರಗಳು ಹಾಗೂ ಸಂಸತ್ತಿನ ಅಣಕು ಅಧಿವೇಶನಗಳನ್ನು ನಡೆಸುವುದು ಮತ್ತು ಕಾನೂನು ಕೀಯೋಸ್ಕ್‌ಗಳನ್ನು ಏರ್ಪಡಿಸುವುದು.

(ಎಂ) ಕಾನೂನು ಮತ್ತು ಸಂಸದೀಯ ಸಾಹಿತ್ಯ ಕ್ಷೇತ್ರಕ್ಕೆ ಕೊಡುಗೆ ನೀಡುವಂಥ ಸಂಶೋಧನಾ ಲೇಖನಗಳನ್ನು, ಕೈಪಿಡಿಗಳನ್ನು, ಪಠ್ಯಪುಸ್ತಕಗಳನ್ನು, ನಿಯತಕಾಲಿಕೆಗಳನ್ನು ಮತ್ತು ಜರ್ನಲ್‌ಗಳನ್ನು ಪ್ರಕಟಿಸುವುದು.

(ಎನ್) ಸಾಮಾಜಿಕ ನೀತಿಗಳು ಮತ್ತು ಶಾಸನಾತ್ಮಕ ಉದ್ದೇಶಕ್ಕೆ ಸಂಬಂಧಪಟ್ಟಂತೆ ತೀರ್ಪುಗಳ ವಿಮರ್ಶಾತ್ಮಕ ಮೌಲ್ಯಮಾಪನ ಮಾಡುವುದಕ್ಕೆ ಅನುಕೂಲವಾಗುವಂತೆ ಅಧ್ಯಯನ ಶಿಬಿರಗಳನ್ನು ಏರ್ಪಡಿಸುವುದು ಮತ್ತು ನ್ಯಾಯ ನಿರ್ಣಯಗಳ ಮಾಹಿತಿ ಬ್ಯಾಂಕನ್ನು ಸ್ಥಾಪಿಸುವುದು.

(ಒ) ಮೇಲೆ ಹೇಳಿದ ವಿಷಯಗಳಿಗೆ ಸಂಗತವಾದಂಥ ಇತರ ಕಾರ್ಯಗಳನ್ನು ಕೈಗೊಂಡು ನೆರವೇರಿಸುವುದು.

ಸಂಸ್ಥೆಯು ಕೆಳಕಂಡ ಪ್ರವರ್ತಕರನ್ನು ಒಳಗೊಂಡಿರತಕ್ಕದ್ದು:-

| | | |
|---|---|---|
| 1. | ಶ್ರೀ ಎನ್ ಧರ್ಮಸಿಂಗ್, ಮುಖ್ಯ ಮಂತ್ರಿಗಳು. | ಮುಖ್ಯ ಪ್ರವರ್ತಕ |
| 1 | ಎ. ಶ್ರೀ ವಿ.ಆರ್.ಸುದರ್ಶನ, ಸಭಾಪತಿ, ವಿಧಾನ ಪರಿಷತ್ತು | ಪ್ರವರ್ತಕ |
| 1 | ಬಿ. ಶ್ರೀ ಕೃಷ್ಣ, ಸಭಾಧ್ಯಕ್ಷರು, ವಿಧಾನ ಸಭೆ. | ಪ್ರವರ್ತಕ |
| 2. | ಶ್ರೀ ಎಂ.ಪಿ. ಪ್ರಕಾಶ್, ಉಪ ಮುಖ್ಯ ಮಂತ್ರಿಗಳು. | ಪ್ರವರ್ತಕ |
| 3. | ಶ್ರೀ ಹೆಚ್.ಕೆ. ಪಾಟೀಲ್, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು | ಪ್ರವರ್ತಕ |
| 4. | ಶ್ರೀ ಬಿ.ಕೆ. ದಾಸ್, ಸರ್ಕಾರದ ಮುಖ್ಯ ಕಾರ್ಯದರ್ಶಿ | ಪ್ರವರ್ತಕ |
| 5. | ಶ್ರೀ ಬ್ರಹ್ಮದತ್, ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ | ಪ್ರವರ್ತಕ |
| 5(ಅ). | ಶ್ರೀ ಸುಧಾಕರ ರಾವ್, ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಪ್ರವರ್ತಕ |
| 6. | ಶ್ರೀ ಎಸ್.ವಿ.ರಂಗನಾಥ್, ಮುಖ್ಯ ಮಂತ್ರಿಯವರ ಪ್ರಧಾನ ಕಾರ್ಯದರ್ಶಿ | ಪ್ರವರ್ತಕ |
| 7. | ಶ್ರೀ ಡಿಸೋಜ ರಾಬಿನಸನ್, ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ | ಪ್ರವರ್ತಕ |
| 8. | ಶ್ರೀ. ಜಿ.ದಕ್ಷಿಣಾಮೂರ್ತಿ, ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ | ಪ್ರವರ್ತಕ |

ಸದರಿ ಸಂಸ್ಥೆಯ ಆಡಳಿತ ವರ್ಗವು ಕೆಳಕಂಡ ಸದಸ್ಯರನ್ನು ಹೊಂದಿರತಕ್ಕದ್ದು ಹಾಗೂ ಈ ಆಡಳಿತ ವರ್ಗವು ಕಾರ್ಯ ನಿರ್ವಹಿಸಲು ಒಂದು ಕರಡು ಬೈಲಾವನ್ನು ಸಿದ್ಧಪಡಿಸಲು ಆದೇಶಿಸಲಾಗಿದೆ.

| | | |
|---|---|---|
| 1. | ಕರ್ನಾಟಕದ ಮುಖ್ಯಮಂತ್ರಿಗಳು, | ಅಧ್ಯಕ್ಷರು |
| 2. | ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು | ಉಪಾಧ್ಯಕ್ಷರು |
| 3. | ಸರ್ಕಾರದ ಮುಖ್ಯ ಕಾರ್ಯದರ್ಶಿ | ಸದಸ್ಯರು |
| 4. | ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 5. | ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿ | ಸದಸ್ಯರು |

6. ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ ಸದಸ್ಯರು
7. ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನಾ ರಚನಾ ಇಲಾಖೆ ಸದಸ್ಯರು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ದಕ್ಷಿಣಾಮೂರ್ತಿ**

ಪಿ.ಆರ್. 1288 ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

## ENERGY SECRETARIAT

**Subject:** Transfer of **4.8** M.W. Wind Power Capacity in favour of M/s. India Power Corporation Limited Orders-reg.

**Read:**
1. Government order No: DE 26 NCE 1999 dated: 13.5.1999.
2. Government order No: EN 76 NCE 2005 dated: 18.3.2005.
3. Letter No. KRED/08/IPCL/2005/1596 dated: 25.8.2005 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated 18.3.2005 read at (2) above, sanction has been accorded for implementation of **192** M.W. capacity Wind Power Project at Chitradurga District to M/s Enercon (India) Limited.

Now, the Managing Director, Karnataka Renewable Energy Development Limited, Bangalore in his letter dated : 25.8.2005 read at (3) above, has recommended to the Government for transfer of **4.8** M.W. Wind Power capacity in favour of M/s. India Power Corporation Limited from out of sanctioned **192** MW Wind Power Capacity at Chitradurga District of M/s Enercon (India) Limited.

The proposal has been examined and pass the following order.

**GOVERNMENT ORDER NO. EN 243 NCE 2005 BANGALORE, DATED: 14th September 2005**

Government is pleased to accord sanction for transfer of **4.8** M.W. Wind Power capacity at Lakkihalli village, Hosadurga Taluk, Chitradurga District in favour of M/s. India Power Corporation Limited from out of sanctioned **192** MW Wind Power Capacity Chitradurga District of M/s Enercon (India) Limited.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka,

**SURESH .B. KRISHNAPPANAVAR**

P.R. 1306 Under Secretary to Government, Energy Department.

**Subject:** Transfer of **2.4** M.W. Wind Power Capacity in favour of M/s. India Power Corporation Limited Orders-reg.

**Read:**
1. Government order No: DE 26 NCE 1999 dated: 13.5.1999.
2. Government order No: EN 76 NCE 2005, dated: 18.3.2005.
3. Letter No. KRED/08/IPCL/2005/1594 dated: 25.8.2005 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated 18.3.2005 read at (2) above, sanction has been accorded for implementation of **192** M.W. capacity Wind Power Project at Chitradurga District to M/s Enercon (India) Limited.

Now, the Managing Director, Karnataka Renewable Energy Development Limited, Bangalore in his letter dated : 25.8.2005 read at (3) above, has recommended to the Government for transfer of **2.4** M.W. Wind Power capacity in favour of M/s. India Power Corporation Limited from out of sanctioned **192** MW Wind Power Capacity at Chitradurga District of M/s Enercon (India) Limited.

The proposal has been examined and pass the following order:

**GOVERNMENT ORDER NO. EN 242 NCE 2005 ,BANGALORE, DATED: 14th September 2005**

Government is pleased to accord sanction for transfer of **2.4** M.W. Wind Power capacity at Lakkihalli village, Hosadurga Taluk, Chitradurga District in favour of M/s. India Power Corporation Limited from out of sanctioned **192** MW Wind Power Capacity Chitradurga District of M/s Enercon (India) Limited.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka,

**SURESH .B. KRISHNAPPANAVAR**

P.R. 1307 Under Secretary to Government, Energy Department.